

# ಸಪ್ತಗಿರಿ

ಜನವರಿ 1986

ಬೆಲೆ: ರೂ ೧.



ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ದಾಸನ ಮಾಡಿಕೊ ಎನ್ನ ಸ್ವಾಮಿ
ಸಾಸಿರ ನಾಮದ ವೆಂಕಟರಮಣ ॥ ಪ ॥

ದುರ್ಬುದ್ಧಿಗಳನೆಲ್ಲ ಬಿಡಿಸೊ ನಿನ್ನ
ಕರುಣ ಕವಚವೆನ್ನ ಹರಣಕ್ಕೆ ತೊಡಿಸೊ
ಚರಣ ಸೇವೆಯೆನಗೆ ಕೊಡಿಸೊ ಅಭಯ
ಕರಪುಷ್ಪವನೆನ್ನ ಶಿರದಲ್ಲಿ ಮುಡಿಸೊ ॥ 1 ॥

ದೃಢಭಕ್ತಿ ನಿನ್ನಲ್ಲಿ ಬೇಡಿ ನಾ
ನಡಿಗೆರಗುವೆನಯ್ಯ ಅನುದಿನಪಾಡಿ
ಕಡೆಗಣ್ಣಲೇಕೆನ್ನ ನೋಡಿಬಿಡುವೆ
ಕೊಡು ನಿನ್ನ ಧ್ಯಾನವ ಮನವ ಶುಚಿಮಾಡಿ ॥ 2 ॥

ಮರೆ ಹೊಕ್ಕವರ ಕಾವ ಬಿರುದ ಎನ್ನ
ಮರೆಯದೆ ರಕ್ಷಣೆ ಮಾಡಯ್ಯ ಪೊರೆದು
ದುರಿತಗಳೆಲ್ಲವ ತರಿದು ಸಿರಿ
ಪುರಂದರ ವಿಠಲ ಎನ್ನನು ಪೊರೆಯೊ ॥ 3 ॥

—ಶ್ರೀ ಪುರಂದರದಾಸರು.

ಸಂದರ್ಶಿಸಿ ಆನಂದಿಸಿ

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ

## ವಾರ್ಷಿಕ ತೆಪ್ಪೋತ್ಸವ 1986

**20-2-86 ರಿಂದ 24-2-86 ವರೆಗೆ**

| | | |
|---|---|---|
| 20–2–86 | ಗುರುವಾರ | ಶ್ರೀ ಕೋದಂಡರಾಮಸ್ವಾಮಿ ತೆಪ್ಪೋತ್ಸವ |
| 21–2–86 | ಶುಕ್ರವಾರ | ಶ್ರೀಕೃಷ್ಣ ಸ್ವಾಮಿ, ಶ್ರೀ ಆಂಡಾಳ್ ಅಮ್ಮನವರ ತೆಪ್ಪೋತ್ಸವ |
| 22–2–86 | ಶನಿವಾರ | ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವ |
| 23–2–86 | ಭಾನುವಾರ | ” ” |
| 24–2–86 | ಸೋಮವಾರ | ” ” |

ಶ್ರೀಗೋವಿಂದ ರಾಜಸ್ವಾಮಿ ದೇವಾಲಯವು ತಿರುಪತಿಯ ರೇಲುವೆ ಬಸ್ ನಿಲ್ದಾಣಗಳ ಬಳಿಯಲ್ಲಿದ್ದು ಪ್ರತಿ ಯಾತ್ರಿಕರೂ ದರ್ಶಿಸಲಪೇಕ್ಷಿಸುವ ಸ್ಥಳವಾಗಿದೆ.

ತಿರುಮಲೆ ತಿರುಪತಿ ದೇವಸ್ಥಾನಗಳು.

ನೀವೂ ಬನ್ನಿ ನಿಮ್ಮವರನ್ನೂ ಕರೆತನ್ನಿ

---

ಸಂದರ್ಶಿಸಿ ಆನಂದಿಸಿ

# ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ ಶ್ರೀನಿವಾಸ ಮಂಗಾಪುರ

## ವಾರ್ಷಿಕ ಬ್ರಹ್ಮೋತ್ಸವ

**ದಿನಾಂಕ 26-2-86 ರಿಂದ 7-3-86 ರ ವರೆಗೆ**

| | | |
|---|---|---|
| 26–2–86 | ಬುಧವಾರ | ಅಂಕುರಾರ್ಪಣೆ |
| 3–3–86 | ಸೋಮವಾರ | ಗರುಡೋತ್ಸವ |
| 6–3–86 | ಗುರುವಾರ | ರಥೋತ್ಸವ |
| 7–3–86 | ಶುಕ್ರವಾರ | ತೀರ್ಥವಾರಿ |

ಶ್ರೀನಿವಾಸಮಂಗಾಪುರ ತಿರುಪತಿ–ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ 7 ಕಿ.ಮೀ: ದೂರದಲ್ಲಿದೆ. ತಿರುಪತಿಯಿಂದಲೂ ಚಂದ್ರಗಿರಿಯಿಂದಲೂ ವಾಹನ ಸೌಲಭ್ಯವಿದೆ. ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿನಿತ್ಯವೂ ವಿವಿಧವಾಹನೋತ್ಸವಗಳೂ, ಸಾಂಸ್ಕೃತಿಕ ಕಾರ್ಯಕ್ರಮಗಳೂ ನಡೆಯುತ್ತವೆ. ವಿವರಗಳಿಗಾಗಿ ತಿ. ತಿ. ದೇ. ವಿಚಾರಣಾ ಕೇಂದ್ರದಲ್ಲಿ ವಿಚಾರಿಸಿ.

ತಿರುಮಲೆ – ತಿರುಪತಿ ದೇವಸ್ಥಾನಗಳು.

**ನೀವೂ ಬನ್ನಿ, ನಿಮ್ಮವರನ್ನೂ ಕರೆತನ್ನಿ.**




ಗೌರವ ಸಂಪಾದಕರು :

ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. -ಸಂ॥


ಸಂಪುಟ ೧೬] ಜನವರಿ ೧೯೮೬ [ಸಂಚಿಕೆ ೮


# ವಿಷಯಸೂಚಿ



ರಕ್ಷಾಪತ್ರ : ಶ್ರೀವೆಂಕಟೇಶ್ವರಸ್ವಾಮಿಯರಿಗೆ ಡಿಸೆಂಬರ್ 20 ರಂದು ಅರ್ಪಿಸಲಾದ ಹೊಸ ವಜ್ರಕಿರೀಟದ ದೃಶ್ಯಗಳು ಮತ್ತು ವೆಚ್ಚದ ವಿವರ. (ವಿವರ ವರದಿಗಾಗಿ ಫೆಬ್ರುವರಿ 1986 ರ ಸಂಚಿಕೆ ನೋಡಿ)

# ಸಂಸ್ಕೃತದ ಸ್ತೋತ್ರಸಾಹಿತ್ಯ

ಸಂಸ್ಕೃತ ಸಾಹಿತ್ಯದಲ್ಲಿ ಸ್ತೋತ್ರಸಾಹಿತ್ಯವು ಒಂದು ವಿಶಿಷ್ಟವಾದ ಪ್ರಕಾರವಾಗಿದೆ. ವಿಶ್ವದ ಎಲ್ಲ ಪ್ರಮುಖಭಾಷೆಗಳಲ್ಲಿ ಕೆಲವೊಂದು ಸ್ತೋತ್ರಗಳು ಇದ್ದರೂ, ಅವು ಒಂದು ಸಾಹಿತ್ಯದ ಪ್ರಕಾರವಾಗಿ ಬೇರೆ ಯಾವ ಭಾಷೆಯಲ್ಲಿಯೂ ಬೆಳೆದು ಬಂದಿಲ್ಲ. ಸಂಸ್ಕೃತದಲ್ಲಿ ಮಾತ್ರ ಸ್ತೋತ್ರಗಳು ಒಂದು ಸಾಹಿತ್ಯದ ಪ್ರಕಾರವೇ ಆಗಿ ವಿಪುಲವಾಗಿಯೂ ವೈವಿಧ್ಯಪೂರ್ಣವಾಗಿಯೂ ಬೆಳೆದು ಬಂದಿವೆ.

ಕಾವ್ಯದ ಉಗಮಕ್ಕೆ ಮುಖ್ಯವಾದ ಕಾರಣ ಮಾನವನ ಭಾವನೆಗಳು ಉಕ್ಕೇರಿ ಬರುವುದು. ಮಾನವನ ಭಾವನೆಗಳು ಜೀವನದ ವಿವಿಧ ಸಂದರ್ಭಗಳಲ್ಲಿ ಉಕ್ಕೇರಿ ಬರುವುವು. ಆಯಾ ಸಂದರ್ಭಕ್ಕೆ ತಕ್ಕಂತೆ ಕಾವ್ಯ ರೂಪವನ್ನು ತಾಳುವವು. ಅನಂತವೂ ವಿಚಿತ್ರವೂ ಆದ ಈ ವಿಶ್ವದ ಮತ್ತು ಅದರ ನಿಯಾಮಕನ ಭವ್ಯತೆಯ ಅರಿವಾದಾಗ, ಅವನ ವಿಶಾಲ ವಿಶ್ವದಲ್ಲಿ ಮಾನವನಿಗೆ ಅವನಿಂದಾಗುವ ಉಪಕಾರದ ಅರಿವಾದಾಗ, ಅವನ ಸ್ತೋತ್ರ ಮಾಡಬೇಕೆಂದೆನಿಸುವುದು. ಅವನ ಮಹಿಮೆಯ ಅರಿವಾಗಿ ಅವನಲ್ಲಿ ಅಗಾಧವಾದ ಸ್ನೇಹ ಅಥವಾ ಭಕ್ತಿಯುಂಟಾಗಿ ಅದನ್ನು ವ್ಯಕ್ತಪಡಿಸಲು ಸ್ತೋತ್ರಕಾವ್ಯವು ರೂಪವನ್ನು ತಾಳುವುದು.

ಮಾಹಾತ್ಮ್ಯಜ್ಞಾನಪೂರ್ವಸ್ತು
ಸುದೃಢಃ ಸರ್ವತೋಽಧಿಕಃ
ಸ್ನೇಹೋ ಭಕ್ತಿರಿತಿ ಪ್ರೋಕ್ತಃ
ತಯಾ ಮುಕ್ತಿಃ ನ ಚಾನ್ಯಥಾ ॥

ಈ ಭಕ್ತಿಯಿಂದುಂಟಾದ ಶಬ್ದಚಿತ್ರವೇ ಸ್ತೋತ್ರಕಾವ್ಯ. ಇದರಂತೆಯೇ ಮಾನವನು ಕಷ್ಟದಲ್ಲಿದ್ದಾಗ, ತನ್ನ ಅಲ್ಪತೆಯ ಅಥವಾ ಅಸಹಾಕತೆಯ ಅರಿವಾದಾಗಲೂ ರಕ್ಷಣೆಗಾಗಿ ಸ್ತೋತ್ರಮಾಡುವನು. ತನ್ನ ಆತ್ಮವಿಕಾಸವನ್ನು ಪಡೆಯಲು ವಿಶ್ವಶಕ್ತಿಗೆ ಶರಣಾಗತನಾಗಿಯೂ ಸ್ತೋತ್ರ ಮಾಡುವನು. ಹೀಗೆ ದೇವರು, ಗುರುಗಳು ಮತ್ತು ಇನ್ನಿತರ ಸ್ವೋತ್ತಮರ ಮಹಿಮೆಯನ್ನು ಅರಿತು ಸಂತೋಷದಿಂದ ಕೊಂಡಾಡುವುದು, ಕಷ್ಟದಲ್ಲಿದ್ದಾಗ ಉತ್ತಮರಿಂದ ರಕ್ಷಣೆಯನ್ನು ಕೋರಿ ಸ್ತುತಿಸುವುದು, ಆತ್ಮೋನ್ನತಿಗಾಗಿ ವಿಶ್ವಶಕ್ತಿಗೆ ಶರಣಾಗತನಾಗಿ ಸ್ತುತಿಸುವುದು–ಇವು ಸ್ತೋತ್ರಸಾಹಿತ್ಯದ ಪ್ರಧಾನವಾದ ಮೂರು ಪ್ರಕಾರಗಳು. ಕೃತಕಸ್ತೋತ್ರವು ಲೋಕದಲ್ಲಿ ಬಳಕೆಯಲ್ಲಿದ್ದರೂ ಸಾಹಿತ್ಯದ ಪ್ರಕಾರದಲ್ಲಿ ಬರುವುದಿಲ್ಲ: ವಿಡಂಬನೆಯ ಸ್ತೋತ್ರವೂ ವಿಡಂಬನ ಸಾಹಿತ್ಯವೇ ಹೊರತು ಸ್ತೋತ್ರಸಾಹಿತ್ಯವಲ್ಲ.

ಸಂಸ್ಕೃತ ಕಾವ್ಯಗಳ ಪ್ರಯೋಜನವನ್ನು ವಿವರಿಸುತ್ತ ಆರು ಪ್ರಯೋಜನಗಳನ್ನು ಹೇಳಿದ್ದಾರೆ. ಕೀರ್ತಿ, ಹಣ, ಲೋಕವ್ಯವಹಾರಜ್ಞಾನ, ಅಮಂಗಲಪರಿಹಾರ, ಆನಂದ, ಉಪದೇಶ ಇವು ಆರು ಕಾವ್ಯದ ಪ್ರಯೋಜನಗಳು.

ಕಾವ್ಯಂ ಯಶಸೇ ಅರ್ಥಕೃತೇ
ವ್ಯವಹಾರವಿದೇ ಶಿವೇತರಕ್ಷತಯೇ,
ಸದ್ಯಃ ಪರನಿರ್ವೃತಯೇ ಕಾಂತಾ
ಸಮ್ಮಿತತಯಾ ಉಪದೇಶಯುಜೇ.

ಎಂದು ಈ ಆರನ್ನೂ ಹೇಳಿದ್ದಾರೆ. ಇವುಗಳಲ್ಲಿ ಅಮಂಗಲಪರಿಹಾರ, ಆನಂದ ಮತ್ತು ಉಪದೇಶ ಈ ಮೂರೂ ಸ್ತೋತ್ರಸಾಹಿತ್ಯದ ಪ್ರಯೋಜನಗಳು. ಇವುಗಳಲ್ಲಿ ಅಮಂಗಲಪರಿಹಾರ ಅಥವಾ ಅಶುಭ ಪರಿಹಾರವಂತೂ ಸ್ತೋತ್ರಸಾಹಿತ್ಯದ ಪ್ರಯೋಜನವೇ ಆಗಿದೆ. ಇದಕ್ಕೆ ಮಯೂರ ಕವಿಯು ಬರೆದ ಸೂರ್ಯಶತಕವನ್ನು ನಿದರ್ಶನವನ್ನಾಗಿ ಕೊಡುತ್ತಾರೆ. ಮಯೂರನು ಸೂರ್ಯನನ್ನು ಸ್ತುತಿಸಿ ಕಣ್ಣುಗಳನ್ನು ಪಡೆದನಂತೆ.

ವಿಶ್ವದಲ್ಲಿಯೇ ಅತಿಪ್ರಾಚೀನವೆನಿಸಿದ ಋಗ್ವೇದವು ಒಂದು ಅತ್ಯುತ್ತಮವಾದ ಸ್ತೋತ್ರಗಳ ಸಂಕಲನ. ಇದು ಋಷಿಗಳು ಕಂಡ ನಿಸರ್ಗ ದೇವತೆಗಳ ಸ್ತೋತ್ರಸಂಕಲನ. 'ಅಗ್ನಿಮೀಳೇ' ಎಂದು ಅಗ್ನಿಯ ಸ್ತೋತ್ರದಿಂದಲೇ ಪ್ರಾರಂಭವಾಗುತ್ತದೆ. 'ಅಗ್ನಿಃ ಪೂರ್ವೇಭಿಃ ಋಷಿಭಿಃ ಈಡ್ಯಃ ನೂತನೈರುತ' ಪೂರ್ವದ ಋಷಿಗಳು ಅಗ್ನಿಯನ್ನು ಸ್ತುತಿಸಿದ್ದಾರೆ. ಮುಂದಿನವರೂ ಸ್ತುತಿಸುತ್ತಾರೆ; ಎಂದು ಸ್ತೋತ್ರಕಾವ್ಯದ ಪರಂಪರೆಯು ಅನೂಚಾನವಾಗಿ ನಡೆದುಕೊಂಡು ಬಂದದ್ದನ್ನು ಇಲ್ಲಿ ಹೇಳಿದ್ದಾರೆ. ಯಜುರ್ವೇದದಲ್ಲಿ 'ರುದ್ರ'ನ ಸ್ತೋತ್ರವೇ ಮೊದಲಾದ ಸ್ತೋತ್ರಗಳಿವೆ. ಅಥರ್ವವೇದದಲ್ಲಿ ಶ್ರೀಸೂಕ್ತವೇ ಮೊದಲಾದ ಸ್ತೋತ್ರಗಳಿವೆ. ಉಪನಿಷತ್ತುಗಳಲ್ಲಿ ಅಪರೋಕ್ಷಜ್ಞಾನಿಗಳು ಮಾಡಿದ ಕೆಲವು ಉತ್ತಮ ಸ್ತೋತ್ರಗಳಿವೆ. ಮಹಾಭಾರತದಲ್ಲಿ ವಿಷ್ಣುಸಹಸ್ರನಾಮ, ದುರ್ಗಾಸ್ತೋತ್ರ, ಇತ್ಯಾದಿ ಸ್ತೋತ್ರಗಳಿವೆ. ರಾಮಾಯಣದಲ್ಲಿ ಬ್ರಹ್ಮದೇವರು ಮಾಡಿದ ಶ್ರೀರಾಮನ ಸ್ತೋತ್ರವು ಅತ್ಯುತ್ತಮವಾಗಿದೆ. ಪುರಾಣಗಳಲ್ಲಿ ಬ್ರಹ್ಮ, ವಿಷ್ಣು, ಶಿವ, ಅಂಬಿಕಾ, ಸ್ಕಂದ, ಗಣೇಶ, ಹನುಮಾನ್, ದತ್ತಾತ್ರೇಯ ಇತ್ಯಾದಿ ಸುಮಾರು ನೂರು ಸೋತ್ರಗಳಿವೆ. ಮತಸ್ಥಾಪಕ ಆಚಾರ್ಯರೂ, ಸಂತಕವಿಗಳೂ ಉತ್ತಮವಾದ ಸ್ತೋತ್ರಗಳನ್ನು ರಚಿಸಿದ್ದಾರೆ. ಸಂಗೀತಕ್ಕಾಗಿ ಸಾಹಿತ್ಯವನ್ನು ಒದಗಿಸುವ ಅನೇಕ ಕೃತಿಗಳು ಸ್ತೋತ್ರರೂಪವಾಗಿವೆ. ಸ್ತೋತ್ರಗಳಲ್ಲಿ ಶತಕಗಳೂ, ಬಿಡಿ ಸ್ತೋತ್ರಗಳೂ ವಿಪುಲವಾಗಿವೆ. ಸ್ತೋತ್ರಾರ್ಣವ, ಬೃಹತ್‌ಸ್ತೋತ್ರರತ್ನಾಕರ–ಇತ್ಯಾದಿ ಸಂಕಲನಗಳಲ್ಲಿ ಸುಮಾರು ಒಂದು ಸಾವಿರ ಸ್ತೋತ್ರಗಳನ್ನು ಸಂಕಲಿಸಿ ಪ್ರಕಟಿಸಲಾಗಿದೆ. ಆಯಾ ಮತಸಂಪ್ರದಾಯದ ಸ್ತೋತ್ರ ಸಂಕಲನಗಳೂ ಇವೆ. ಸುಭಾಷಿತಸಂಕಲನಗಳಲ್ಲಿ ದೇವತಾಸ್ತುತಿ ರೂಪದಲ್ಲಿ ಸ್ತೋತ್ರಗಳನ್ನು ಕೊಡಲಾಗಿದೆ. ಕಾವ್ಯ, ನಾಟಕ, ಶಾಸ್ತ್ರ ಗ್ರಂಥ – ಹೀಗೆ ಸಂಸ್ಕೃತದ ಎಲ್ಲ ಗ್ರಂಥಗಳ ಆರಂಭದಲ್ಲಿಯೂ ಅತ್ಯುತ್ತಮವಾದ ಸ್ತೋತ್ರ ಶ್ಲೋಕಗಳಿರುತ್ತವೆ. ಹೀಗೆ ಸಂಸ್ಕೃತದಲ್ಲಿ ಸ್ತೋತ್ರಸಾಹಿತ್ಯವು ವಿಪುಲವಾಗಿ ಬೆಳೆದಿದೆ.

ಸ್ತೋತ್ರಗಳ ವಿಷಯ ವೈವಿಧ್ಯಪೂರ್ಣವಾಗಿರುತ್ತದೆ. ಇಷ್ಟದೇವತೆಯ ರೂಪ, ಮಹಿಮೆ, ಆ ದೇವತೆಯ ಪೌರಾಣಿಕ ಹಿನ್ನೆಲೆ, ಪರಾಕ್ರಮದ ಘಟನೆಗಳು, ಭಕ್ತರಿಗೆ ಅನುಗ್ರಹ ಮಾಡಿದ ಘಟನೆಗಳು, ವಿವಿಧರೂಪಗಳು, ಆಯುಧಗಳು, ಅವತಾರರೂಪಗಳು, ಹೀಗೆ ಆಯಾ ದೇವತೆಗಳ ಒಂದು ಸಾಂಸ್ಕೃತಿಕ ಅಧ್ಯಯನವೇ ಆಗಿರುತ್ತದೆ. ಮತಸಂಪ್ರದಾಯದ ಸ್ತೋತ್ರಗಳಲ್ಲಿ ಮತತ್ರಯಗಳ ದಾರ್ಶನಿಕ ಸಿದ್ಧಾಂತಗಳು ಬಂದಿರುತ್ತವೆ. ರಸ, ಅಲಂಕಾರ, ಭಾಷಾಚಾತುರ್ಯ, ಛಂದಸ್ಸಿನ ವೈವಿಧ್ಯ ಕಂಡುಬರುತ್ತವೆ. ಶರಣಾಗತಿ, ಆರ್ತಭಾವ, ವೈರಾಗ್ಯಭಾವ ಕಂಡುಬರುತ್ತವೆ. ಹೀಗೆ ಸ್ತೋತ್ರಸಾಹಿತ್ಯವು ಕವಿತ್ವ ಮತ್ತು ದಾರ್ಶನಿಕತೆಯ ಮಧುರಮಿಶ್ರಣವಾಗಿದೆ. ಸ್ನೇಹಭಾವ ಮತ್ತು ವೈರಾಗ್ಯ ಭಾವಗಳ ವಿಚಿತ್ರ

**ಪ್ರೊ॥ ಕೆ.ಟಿ. ಪಾಂಡುರಂಗಿ**

ಸೀತಾ ಲಕ್ಷ್ಮೀಃ ಭವಾನ್ ವಿಷ್ಣುಃ
ದೇವಃ ಕೃಷ್ಣಃ ಪ್ರಜಾಪತಿಃ
ವಧಾರ್ಥಂ ರಾವಣಸ್ಯೇಹ
ಪ್ರವಿಷ್ಟೋ ಮಾನುಷೀಂ ತನುಮ್

ಸೀತೆಯು ಲಕ್ಷ್ಮಿಯು, ನೀನು ವಿಷ್ಣುವು, ರಾವಣನನ್ನು ವಧಿಸುವುದಕ್ಕಾಗಿ ಮಾನುಷರೂಪವನ್ನು ತಾಳಿ ಬಂದಿರುವಿ–ಎಂದು ಬ್ರಹ್ಮನು ರಾಮನನ್ನು ಸ್ತುತಿಸಿರುವನು.

ಸಾಹಿತ್ಯದಲ್ಲಿ ಕಾಲಿದಾಸನ ಕುಮಾರಸಂಭವ ಮತ್ತು ರಘುವಂಶಗಳಲ್ಲಿ ಬ್ರಹ್ಮ, ವಿಷ್ಣು ಮಹೇಶ್ವರರ ಉತ್ತಮ ಸ್ತೋತ್ರಗಳಿವೆ.

ನಮಃ ತ್ರಿಮೂರ್ತಯೇ ತುಭ್ಯಂ
ಪ್ರಾಕ್‌ಸೃಷ್ಟೇಃ ಕೇವಲಾತ್ಮನೇ
ಗುಣತ್ರಯ ವಿಭಾಗಾಯ
ಪಶ್ಚಾದ್ ಭೇದ ಮುಪೇಯುಷೇ
ಜಗದ್ಯೋನಿ ರಯೋನಿ ಸ್ತ್ವಂ
ಜಗದಂತೋ ನಿರಂತಕಃ
ಜಗದಾದಿ ರನಾದಿ ಸ್ತ್ವಂ
ಜಗದೀಶೋ ನಿರೀಶ್ವರಃ

ಎಂಬುದು ಕುಮಾರಸಂಭವದಲ್ಲಿ ಬರುವ ಬ್ರಹ್ಮನ ಸ್ತುತಿ. ಇದರಂತೆಯೇ ಶಿವ ಮತ್ತು ವಿಷ್ಣು ಸ್ತುತಿಗಳೂ ಕಾಲಿದಾಸನ ಕೃತಿಗಳಲ್ಲಿವೆ. ಅವನ ಕಾಲ ತ್ರಿಮೂರ್ತಿಗಳ ಸಮನ್ವಯ ಕಾಲ.

ಮತಸ್ಥಾಪಕ ಆಚಾರ್ಯರ ಸ್ತೋತ್ರಗಳಲ್ಲಿ ಶ್ರೀ ಶಂಕರಾಚಾರ್ಯರು ರಚಿಸಿದ ಸ್ತೋತ್ರಗಳು ದಾರ್ಶನಿಕ ತತ್ತ್ವಗಳ ಸುಲಲಿತವಾದ ನಿರೂಪಣೆಯಲ್ಲದೆ, ನಾದಮಾಧುರ್ಯದಿಂದಲೂ, ಸುಂದರವಾದ ಉಪಮೆ ದೃಷ್ಟಾಂತಗಳಿಂದಲೂ ತುಂಬ ಮನೋಹರವಾಗಿವೆ. ಜೀವನದ ಹುಚ್ಚು ಹವ್ಯಾಸಗಳನ್ನು ಬಿಡಲು ತುಂಬ ಮಾರ್ಗದರ್ಶಕವಾಗಿವೆ. 'ಆತ್ಮಪಂಚಕ'ವೆಂಬ ಅವರು ಬರೆದ ಸ್ತೋತ್ರದಲ್ಲಿ;

ನಾಹಂ ದೇಹೋ ನೇಂದ್ರಿಯಾಣಿ
ಅಂತರಂಗಮ್
ನಾಹಂಕಾರಃ ಪ್ರಾಣವರ್ಗೋ ನ ಬುದ್ಧಿಃ
ದಾರಾಪತ್ಯಕ್ಷೇತ್ರ ವಿತ್ತಾದಿದೂರಃ
ಸಾಕ್ಷೀ ನಿತ್ಯಃ ಪ್ರತ್ಯಗಾತ್ಮಾ ಶಿವೋಽಹಮ್

ನಾನು ದೇಹನಲ್ಲ, ಇಂದ್ರಿಯಗಳಲ್ಲ, ಅಂತಃಕರಣನಲ್ಲ, ಪ್ರಾಣನಲ್ಲ, ಹೆಂಡತಿ ಮಕ್ಕಳು ಆಸ್ತಿಯಲ್ಲ, ಆದರೆ ನಿತ್ಯ ಸಾಕ್ಷಿಯಾದ ಪ್ರತ್ಯಗಾತ್ಮನೇ ಆಗಿದ್ದೇನೆ–ಎಂದು ಆತ್ಮೈಕ್ಯ ಸಿದ್ಧಾಂತವನ್ನು ಸುಲಭವಾಗಿ ಪ್ರತಿಪಾದಿಸಿದ್ದಾರೆ.

ಅಂಗಂ ಗಲಿತಂ ಪಲಿತಂ ಮುಂಡಮ್
ದಶನ ವಿಹೀನಂ ಜಾತಂ ತುಂಡಮ್
ವೃದ್ಧೋ ಯಾತಿ ಗೃಹೀತ್ವಾ ದಂಡಮ್
ತದಪಿ ನ ಮುಂಚತಿ ಆಶಾ ಪಿಂಡಮ್
ಭಜ ಗೋವಿಂದಂ ಭಜ ಗೋವಿಂದಂ
ಭಜ ಗೋವಿಂದಮ್ ಮೂಢಮತೇ
ಪ್ರಾಪ್ತೇ ಸನ್ನಿಹಿತೇ ಕಾಲೇ
ನಹಿ ನಹಿ ರಕ್ಷತಿ ಡುಕೃಞ್ ಕರಣೇ

ಎಂಬ ಅವರ ಭಜಗೋವಿಂದ ಸ್ತೋತ್ರವು ಪ್ರಸಿದ್ಧವೇ ಆಗಿದೆ.

ಅನೇಕ ಸುಂದರವಾದ ಸ್ತೋತ್ರಗಳನ್ನು ಬರೆದ ವೇದಾಂತದೇಶಿಕರ ಸ್ತೋತ್ರಗಳು ವಿಶಿಷ್ಟಾದ್ವೈತ ತತ್ತ್ವಗಳನ್ನೂ ಶರಣಾಗತಿಯನ್ನೂ ಚೆನ್ನಾಗಿ ವಿವರಿಸುತ್ತವೆ.

ನಾಸ್ತಿ ಪಿತ್ರಾರ್ಜಿತಂ ವಿತ್ತಂ
ನ ಮಯಾ ಕಿಂಚಿದರ್ಜಿತಮ್
ಅಸ್ತಿಮೇ ಹಸ್ತಿಶೈಲಾಗ್ರೇ
ವಸ್ತು ಪೈತಾಮಹಂ ಧನಮ್

ಶ್ರೀ ಮಧ್ವಾಚಾರ್ಯರ ದ್ವಾದಶಸ್ತೋತ್ರವು ತತ್ತ್ವಜ್ಞಾನ, ಭಕ್ತಿ, ಕಾವ್ಯಗುಣ ಮತ್ತು ಗೀತ ಮಾಧುರ್ಯವನ್ನು ಪಡೆದ ಉತ್ತಮವಾದ ಸ್ತೋತ್ರಕಾವ್ಯ, ಶ್ರೀಹರಿಯ ನಾನಾ ಅವತಾರಗಳನ್ನೂ ರೂಪಗಳನ್ನೂ ಇಲ್ಲಿ ಸ್ತುತಿಸಿದ್ದಾರೆ. ಅವನ ಅಘಟಿತ ಘಟನಾಸಾಮರ್ಥ್ಯವನ್ನು ವಿವರಿಸಿದ್ದಾರೆ. ಇದು ಹನ್ನೆರಡು ಸ್ತೋತ್ರಗಳ ಸಂಕಲನ.

ಕುರು ಭುಂಕ್ಷ್ವ ಚ ಕರ್ಮ
ನಿಜಂ ನಿಯತಮ್
ಹರಿಪಾದವಿನಮ್ರಧಿಯಾ ಸತತಮ್
ಹರಿರೇವ ಪರೋ ಹರಿರೇವ ಗುರುಃ
ಹರಿರೇವ ಜಗ ತ್ಪಿತೃಮಾತೃಗತಿಃ

ಎಂಬ ಸ್ತೋತ್ರದಲ್ಲಿ ಭಗವಂತನ ಪೂಜಾರೂಪವಾಗಿ ತಮ್ಮ ತಮ್ಮ ಕರ್ತವ್ಯಗಳನ್ನು ಮಾಡಬೇಕು ಎಂಬ ಅವರ ಸಿದ್ಧಾಂತವೇ ಹರಿದು ಬಂದಿದೆ.

ವಿಶ್ವ ಸ್ಥಿತಿ ಪ್ರಲಯ ಸರ್ಗ
ಮಹಾವಿಭೂತಿವೃತ್ತಿಪ್ರಕಾಶ
ನಿಯಮಾವೃತಿಬಂಧಮೋಕ್ಷಾಃ
ಯಸ್ಯಾ ಅಪಾಂಗಲವಮಾತ್ರತ
ಊರ್ಜಿತಾ ಸಾ ಶ್ರೀರ್ಯತ್
ಕಟಾಕ್ಷಬಲವತ್ಯಜಿತಂ ನಮಾಮಿ

ಎಂಬ ಸ್ತೋತ್ರದಲ್ಲಿ ತತ್ತ್ವಗಳ ಗಾಂಭೀರ್ಯದ ಜೊತೆಗೆ ಸಂಗೀತದ ಮಾಧುರ್ಯವೂ ಸೇರಿಕೊಂಡಿದೆ.

ಸ್ತೋತ್ರಾರ್ಣವ, ಬೃಹತ್ ಸ್ತೋತ್ರರತ್ನಾಕರ ಇತ್ಯಾದಿ ಸ್ತೋತ್ರ ಸಂಕಲನಗಳಲ್ಲಿ ದೇವತಾನುಕ್ರಮದಿಂದ ಸ್ತೋತ್ರಗಳು ಸಂಕಲ್ಪಿಸಲ್ಪಟ್ಟಿವೆ. ಗಣಪತಿಯ ಅನೇಕ ಸ್ತೋತ್ರಗಳಲ್ಲಿ ಒಂದು ನೋಡೋಣ.

ಗಿರಿಸ್ವಾಮಿಕನ್ಯಾವರಾಂಗೇ ವಸಂತಮ್
ಸುರಸ್ವಾಮಿನಂ ಕೇಲಿರೂಪಂ ವಹಂತಮ್
ಲಘುಸ್ಥೂಲವಿಘ್ನಂವಿನಿಘ್ನಂತ ಮಾದ್ಯಮ್
ಸದಾನಂದರೂಪಂ ಗಣೇಶಂ ಭಜೇಽಹಮ್

ಇದರಲ್ಲಿಯ ತಾಳ–ಲಯಗಳು ಆಕರ್ಷಕವಾಗಿವೆ.

ಶಿವನ ಸ್ತೋತ್ರಗಳಲ್ಲಿ ತಾಂಡವನೃತ್ಯದ ಸ್ತೋತ್ರಗಳು ಚಿತ್ತಾಕರ್ಷಕವಾಗಿವೆ.

ಧಿಂಧಿಮಿಧಿಮಿಧಿಮಿ ಶಬ್ದೈಃ
ಬಂಧುರಪದಮಂದರಂ ನಟಂತಮ್
ಝುಂಝುಣ ಝುಣಝುಣರಾವಾ
ರಂಜಿತ ಮಹಿಮಂಡಿತಂ ಶಿವಂ ಸೇವೇ
ತಕ್ಕತೋ ಧಿಕ್ಕತೋ ತಾತಥಾ ತೃತಥ್ಯ
ತೋಂಗದಮ್ಮಂಗಧಿನ್ನತ್ತಶಬ್ದಾನ್ ಮುಹುಃ
ಉಚ್ಚರನ್‌ಹಾಸವಿನ್ಯಾಸ ಚಂಚನ್ಮುಖಃ
ಸನ್ನನರ್ತ ಸ್ವಯಂ ಶ್ರೀಭವಾನೀಪತಿಃ

ಎಂಬ ಸ್ತೋತ್ರಗಳು ತಾಂಡವ ನೃತ್ಯಕ್ಕೆ ಅನುಗುಣವಾದ ಶಬ್ದಯೋಜನೆಯುಳ್ಳವಾಗಿವೆ. ಓರ್ವ ಶಿವಭಕ್ತನು,

ಸಂತು ಸಹಸ್ರಂ ದೇವಾಃ ತದ್ಗುಣ
ದೋಷೋಕ್ತಿಭಿಃ ಕಿಮಸ್ಮಾಕಮ್
ಶಿವಮೇವ ವರ್ಣಯಾಮಃ
ಪುನರಪಿ ಶಿವಮೇವ ಶಿವಮೇವ

ಎಂದು ತನ್ನ ಶಿವಭಕ್ತಿಯನ್ನು ವ್ಯಕ್ತಪಡಿಸುತ್ತಾನೆ. ಹದಿನಾಲ್ಕು ಹಾವುಗಳನ್ನುಳ್ಳ ಆಭರಣಗಳಂತೆ ಕಿವಿ, ಕೈಗಳು, ತೋಳುಗಳು, ಪಕ್ಕೆಗಳು, ಪಾದಗಳು, ಸೊಂಟ, ಹೊಟ್ಟೆ, ಕೊರಳು ಮತ್ತು ತಲೆಯ ಮೇಲೆ ಧರಿಸಿದ ಅಘೋರರೂಪವನ್ನು ಓರ್ವ ಸ್ತೋತ್ರ ಕವಿ ಹೀಗೆ ವರ್ಣಿಸುತ್ತಾನೆ.

ಕರ್ಣದ್ವಯೇ ಕರಯುಗೇ
ಭುಜಯೋಶ್ಚ ಯುಗ್ಮೇ
ಪಾರ್ಶ್ವದ್ವಯೇ ಪದಯುಗೇ
ಕಟಿಮಂಡಲೇ ಚ
ಕುಕ್ಷೌ ಗಲೇ ಶಿರಸಿ ನಾಥ ಚತುರ್ದಶಾಹೀನ್
ತತ್ತದ್ವಿಭೂಷಣಕೃತಾತ್ಮತನೂ ಬಿಭರ್ಷಿ

ರಾಮನಾಮವನ್ನು ಉಚ್ಚರಿಸುವಾಗ 'ರಾ' ಎನ್ನಲು ಬಾಯಿ ತೆಗೆಯಬೇಕಾಗುವುದು. 'ಮ' ಎನ್ನಲು ಮುಚ್ಚಬೇಕಾಗುವುದು. ರಾ ಎಂದು ಬಾಯಿ ತೆರೆದಾಗ ಪಾಪಗಳು ಹೊರಗೆ

ಸಂಗಮವಾಗಿದೆ. ಶಬ್ದ ಚಾತುರ್ಯ, ನಾದ ಮಾಧುರ್ಯ, ಅರ್ಥಚಮತ್ಕಾರ ಮತ್ತು ಭಾವಾವಿಷ್ಕರಣಗಳ ಉತ್ತಮ ಆಕರವಾಗಿದೆ. ಎಲ್ಲ ಸಾಹಿತ್ಯಪ್ರಕಾರಗಳಂತೆ ಇದರಲ್ಲಿಯೂ ಕೆಲವು ಕೃತಿಗಳು ಅತ್ಯುತ್ತಮ ಮಟ್ಟದವೂ ಆಗಿದ್ದು, ಅನೇಕ ಕೃತಿಗಳು ಸಾಮಾನ್ಯ ಮಟ್ಟದವೂ ಕೆಲವು ವ್ಯರ್ಥ ಪ್ರಯಾಸದ ರೂಪದ ಕೃತಿಗಳೂ ಕಂಡು ಬರುತ್ತವೆ. ಆದರೆ ಉತ್ತಮ ಕೃತಿಗಳಿಂದ ಆಗುವ ಆನಂದ, ನಾದಮಾಧುರ್ಯದ ಪ್ರಭಾವ, ಭಾವಾವಿಷ್ಕಾರದ ಸರಳತೆ, ಅರ್ಥಚಮತ್ಕಾರ, ಭಕ್ತಿಯ ಪರವಶತೆ, ಸ್ತೋತ್ರ ಸಾಹಿತ್ಯಕ್ಕೆ ಉತ್ತಮವಾದ ಸ್ಥಾನವನ್ನು ದೊರಕಿಸಿಕೊಟ್ಟಿವೆ.

ಇಂಥ ಅತ್ಯುತ್ತಮ ಸ್ತೋತ್ರಸಾಹಿತ್ಯದ ಕೆಲವು ನಿದರ್ಶನಗಳನ್ನು ನಾವು ನೋಡಬಹುದು.

ಋಗ್ವೇದದ ಸ್ತೋತ್ರಗಳಲ್ಲಿ ಪುರುಷಸೂಕ್ತವು ಶ್ರೇಷ್ಠವಾದುದು.

ಸಹಸ್ರಶೀರ್ಷಾ ಪುರುಷಃ
ಸಹಸ್ರಾಕ್ಷಃ ಸಹಸ್ರಪಾತ್
ಸ ಭೂಮಿಂ ವಿಶ್ವತೋ ವೃತ್ವಾ
ತ್ಯತಿಷ್ಠತ್ ದಶಾಂಗುಲಮ್

ಎಂದು ಆರಂಭವಾಗುವ ಈ ಸ್ತೋತ್ರದಲ್ಲಿ ವಿಶ್ವ ನಿಯಾಮಕನ ಭವ್ಯರೂಪವನ್ನು ಸುಂದರವಾಗಿ ಚಿತ್ರಿಸಲಾಗಿದೆ.

ಪುರುಷ ಏವೇದಂ ಸರ್ವಂ
ಯದ್ಭೂತಂ ಯಚ್ಚ ಭವ್ಯಮ್
ಉತಾಮೃತತ್ವಸ್ಯೇಶಾನೋ
ಯದನ್ನೇನಾತಿರೋಹತಿ

ಎಂದು ಪುರುಷನ ಸರ್ವವ್ಯಾಪಿತ್ವವನ್ನೂ ಅವನು ದೇಶತಃ ಮತ್ತು ಕಾಲತಃ ಅನಂತವಾಗಿರುವು ದನ್ನೂ ವಿವರಿಸಲಾಗಿದೆ.

ಪಾದೋಽಸ್ಯ ಸರ್ವಭೂತಾನಿ
ತ್ರಿಪಾದಸ್ಯಾಮೃತಂದಿವಿ

ಸಮಸ್ತ ವಿಶ್ವವೂ ಅವನ ಏಕದೇಶಮಾತ್ರ ಅವನ ವ್ಯಾಪ್ತಿಗೆ ಮಿತಿಯೇ ಇಲ್ಲ.

ವಿಶ್ವತ ಶ್ಚಕ್ಷು ರುತ
ವಿಶ್ವತೋ ಬಾಹುಃ
ವಿಶ್ವತಸ್ಪಾತ್
ಸಂ ಬಾಹುಭ್ಯಾಂ ಧಮತಿ
ಸಂಪತತ್ರ್ಯೈ ದ್ಯಾವಾಭೂಮೀ
ಜನಯನ್ ದೇವ ಏಕಃ

ಈ ವಿರಾಟಪುರುಷನ ಸಾವಿರ ಕಣ್ಣುಗಳು ಎಲ್ಲ ಕಡೆಗೂ ಚಾಚಿವೆ. ಇವನೇ ದ್ಯಾವಾಪೃಥಿವಿ ಗಳನ್ನು ಸೃಷ್ಟಿಸಿದವನು. ಹೀಗೆ ಪುರುಷಸೂಕ್ತವು ವಿಶ್ವನಿಯಾಮಕನ ಭವ್ಯತೆಯನ್ನು ತಿಳಿಸುವ ಸ್ತೋತ್ರವಾಗಿದೆ. ಜಗತ್ತಿನ ಇನ್ನಿತರ ಭಾಗ ಗಳಲ್ಲಿ ಇನ್ನೂ ನಾಗರಿಕತೆಯೇ ಆರಂಭವಾಗ ದಿರುವಷ್ಟು ಪ್ರಾಚೀನಕಾಲದಲ್ಲಿ ಆರ್ಷಕವಿಗಳು ಇಂಥ ಅದ್ಭುತವಾದ ಸ್ತೋತ್ರವನ್ನು ಮಾಡಿದ್ದಾರೆ.

ಉಪನಿಷತ್ತುಗಳಲ್ಲಿ ಬರುವ ಸ್ತೋತ್ರಗಳಲ್ಲಿ ಈಶಾವಾಸ್ಯದ ಕೊನೆಯ ಮಂತ್ರಗಳಲ್ಲಿ ಬರುವ

ಹಿರಣ್ಮಯೇನ ಪಾತ್ರೇಣ
ಸತ್ಯಸ್ಯಾಪಿಹಿತಂ ಮುಖಮ್
ತತ್ತ್ವಂ ಪೂಷ ನ್ನಪಾವೃಣು
ಸತ್ಯಧರ್ಮಾಯ ದೃಷ್ಟಯೇ

ಇತ್ಯಾದಿಯಾಗಿ ಆರಂಭವಾಗುವ ಸ್ತೋತ್ರವು ಅಪೂರ್ವವಾದುದು. 'ಪೂರ್ಣಗುಣನಾದ ಪರಮಾತ್ಮನೇ ಸೂರ್ಯಮಂಡಲದಲ್ಲಿದ್ದ ನಿನ್ನ ರೂಪವನ್ನು ನಿನ್ನ ಭಕ್ತನಾದ ನನಗೆ ದರ್ಶನ ಮಾಡಿಸು' ಎಂಬ ಪ್ರಾರ್ಥನೆಯು ಅಪೂರ್ವ ವಾಗಿದೆ.

ಇತಿಹಾಸ—ಆದಿಕಾವ್ಯ ಪುರಾಣಗಳಲ್ಲಿ ಬರುವ ಸ್ತೋತ್ರಗಳಲ್ಲಿ ರಾಮಾಯಣದಲ್ಲಿಯ ರಾಮ ಬ್ರಹ್ಮ ಸ್ತವವು ಅಪೂರ್ವವಾಗಿದೆ.

ಅಹಂ ತೇ ಹೃದಯಂ ರಾಮ
ಜಿಹ್ವಾ ದೇವೀ ಸರಸ್ವತೀ
ದೇವಾ ಗಾತ್ರೇಷು ರೋಮಾಣಿ
ನಿರ್ಮಿತಾ ಬ್ರಹ್ಮಣಾ ಪ್ರಭೋ
ನಿಮೇಷಸ್ತೇ ಭವೇ ದ್ರಾತ್ರಿಃ
ಉನ್ಮೇಷಸ್ತೇಭವೇ ದ್ದಿವಾ
ಸಂಸ್ಕಾರ ಸ್ತೇಽಭವನ್ ವೇದಾಃ
ನ ತದಸ್ತಿ ತ್ವಯಾ ವಿನಾ

ಶ್ರೀರಾಮ, ಚತುರ್ಮುಖನಾದ ನಾನು ನಿನ್ನ ಹೃದಯನು, ಸರಸ್ವತಿಯು ನಿನ್ನ ನಾಲಿಗೆಯು, ಇನ್ನಿತರ ದೇವತೆಗಳು ನಿನ್ನ ರೋಮಗಳು, ನೀನು ಕಣ್ಣು ಎವೆ ಮುಚ್ಚಿದರೆ ರಾತ್ರಿ, ತೆಗೆದರೆ ಹಗಲು, ವೇದಗಳು ನಿನ್ನ ಸಂಸ್ಕಾರಗಳು. ಈ ಲೋಕದಲ್ಲಿ ನೀನಿಲ್ಲದ್ದು ಇಲ್ಲ.

## ಅನ್ನದಾನ ಯೋಜನೆ ವಿವರಗಳು

"ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ" ಎನ್ನುವ ಹೊಸ ಯೋಜನೆ ಯಲ್ಲಿ ತಿರುಮಲೆಗೆ ಬರುವ ಯಾತ್ರಿಕರಿಗಾಗಿ ಉಚಿತ ಭೋಜನ ನೀಡುವ ಕಾರ್ಯ ವನ್ನು ತಿ. ತಿ. ದೇ. ಆರಂಭಿಸಿದೆ. ಈ ಯೋಜನೆಯ ವಿವರಗಳು ಈ ರೀತಿ ಇವೆ–ಯಾವ ಭಕ್ತರೇ ಆಗಲಿ, ಹತ್ತು ಲಕ್ಷ ರೂ ಗಳನ್ನು ದಾನ ನೀಡಿದಲ್ಲಿ ಅದಕ್ಕೆ ಸಮನಾದ ಅನುದಾನವನ್ನು ತಿ. ತಿ. ದೇ. ಗಳೂ ನೀಡಿ ಒಂದು ದತ್ತಿಯನ್ನು ಸ್ಥಾಪಿಸಿ, ಅದರ ವಾರ್ಷಿಕಬಡ್ಡಿ ಉತ್ಪನ್ನದಿಂದ ದಿನವೂ ಐದುನೂರು ಮಂದಿಗೆ ಉಚಿತ ಭೋಜನ ನೀಡಲಾಗುವುದು. ಈ ದಾನವು ಆದಾಯಕರ ಶಾಸನದ ಯು/ಎಸ್ 80 (ಜಿ) ಕಲಮಿನಂತೆ ಆದಾಯಕರ ವಿಮುಕ್ತವಾಗಿರುವುದು.

ದಾನಿಯ ಹೆಸರನ್ನು ಊಟದ ಕೊಠಡಿಯಲ್ಲಿ ಎದ್ದು ಕಾಣುವಂತೆ ಕಪ್ಪು ಹಲಗೆಯ ಮೇಲೆ ಬರೆಯಲಾಗುವುದು. ಹಾಗೂ ಉಚಿತ ಭೋಜನದ ಚೀಟಿಗಳ ಮೇಲೂ ಮುದ್ರಿಸಲಾಗುವುದು. ಜೊತೆಗೆ ವರ್ಷಕ್ಕೊಮ್ಮೆ ಮೂರು ದಿನಗಳ ಕಾಲ ದಾನಿ ಮತ್ತು ಅವರ ಕುಟುಂಬಕ್ಕೆ ತಿರುಮಲೆಯಲ್ಲಿ ಉಚಿತ ವಸತಿ ಹಾಗೂ ಮೂರು ದಿನವೂ ದೇವಾಲಯದಲ್ಲ ಆರತಿಯೊಡನೆ ದರ್ಶನಾವಕಾಶವನ್ನು ಏರ್ಪಡಿಸಲಾಗುವುದು.

ದೇಶದೊಳಗಿನ ಹಾಗೂ ವಿದೇಶಗಳ ಎಲ್ಲಾ ಮಾನವಸೇವಾ ಪ್ರೇಮಿ ಭಕ್ತರೂ ತಿ.ತಿ.ದೇ. ಗಳ ಈ ಯೋಜನೆಗೆ ಉದಾರವಾಗಿ ದಾನ ನೀಡುವುದರಿಂದ ಅತಿ ಹೆಚ್ಚು ಮಂದಿ ಯಾತ್ರಿಕರಿಗೆ ಭೋಜನಾವಕಾಶವುಂಟುಮಾಡಿ, ಅವರು ತಿರುಮಲೆಯಲ್ಲಿ ಅಶನ ಚಿಂತಾತುರರಾಗುವುದನ್ನು ತಪ್ಪಿಸಬೇಕೆಂದು ಈ ಮೂಲಕ ಬೇಡಲಾಗಿದೆ.

**ತಿ.ತಿ.ದೇ.**

ಹೋಗುವವು. ಅವು ಮತ್ತೆ ಬರಬಾರದೆಂದು ಮ–ಎಂದು ಬಾಯಿ ಮುಚ್ಚುವರು ಎಂದು ಓರ್ವ ಸ್ತೋತ್ರ ಕವಿಯು ರಾಮನಾಮದ ಮಹಿಮೆ ಯನ್ನು ವರ್ಣಿಸುತ್ತಾನೆ.

ರಾಮಶಬ್ದೋಚ್ಚಾರಣಾದೇವ
ಮುಖಾನ್ನಿರ್ಯಾಂತಿ ಪಾತಕಾಃ
ಪುನಃ ಪ್ರವೇಶನಭಿಯಾ
ಮಶಬ್ದಸ್ತು ಕವಾಟವತ್

ಶ್ರೀರಾಮನ ಸ್ತೋತ್ರಗಳು ವಿಪುಲವಾಗಿವೆ. ಶ್ರೀಕೃಷ್ಣನ ಸ್ತೋತ್ರಗಳಲ್ಲಿ ಅವನ ಬಾಲಲೀಲೆ ಗಳನ್ನು ವರ್ಣಿಸುವುದು ಮನೋಹರವಾಗಿವೆ.

ಬಾಲಂ ಬಾಲಂ ಬಾಲಮೇವ ಸ್ಮರಾಮಃ
ನೀಲಂ ನೀಲಂ ನೀಲ ಮಾಲೋಕಯಾಮಃ
ಗೋಪಂ ಗೋಪಂ ಗೋಪಮೇವಾಶ್ರಯಾಮಃ
ಬಾಲಂ ನೀಲಂ ಗೋಪವೇಷಂ ಭಜಾಮಃ

ಪ್ರಾಣಿಗಳು ಒಂದೊಂದು ಗುಣದ ವ್ಯಾಮೋಹ ದಿಂದ ಸಾಯುವುವು. ಆದರೆ ಪರಮಾತ್ಮನನ್ನು ನಂಬಿದರೆ ಈ ವ್ಯಾಮೋಹದಿಂದ ಪಾರು ಮಾಡುವನು ಎಂದು ಓರ್ವ ಸ್ತೋತ್ರಕವಿ ಸೊಗಸಾಗಿ ಹೇಳುವನು. ಹಾವು ಧ್ವನಿಯಿಂದ ಸಾಯುವುದು. ಆನೆ ಸ್ಪರ್ಶದಿಂದ ಸಾಯುವುದು. ದೀಪದ ಹುಳ ಬೆಳಕಿಗೆ ಮರುಳಾಗಿ ಸಾಯುವುದು, ಮೀನು ರಸದಿಂದ ಸಾಯುವುದು, ಮತ್ತು ಅಲಿ ಅಂದರೆ ಭ್ರಮರವು ಅತಿ ಸುವಾಸನೆಯಿಂದ ಸಾಯುವುದು, ಹೀಗೆ ತಮಗೆ ಪ್ರಿಯವಾದ ವಿಷಯ ಗಳಿಂದಲೇ ಸಾಯುವ ಈ ಪ್ರಾಣಿಗಳನ್ನು ಭಗ ವಂತನು ಕಾಪಾಡುವನು.

ಶಬ್ದಾತ್ ಸರ್ಪಮೃತಿಃ
ತಥಾ ಗಜಮೃತಿಃ ಸ್ಪರ್ಶಾತ್
ನಷ್ಟೋಽಭೂತ್ ಶಲಭಃ
ತಥೈವ ರಸತೋ ಮತ್ಸ್ಯಾಲಿಶ್ಚ ಗಂಧಾ ದಲಿಃ
ಸರ್ವೈಃ ಸ್ವೈಃ ವಿಷಯೈಃ
ನಿಪೀಡಿತ ತನೂನ್ ಯಃ ಪಾಲಯತ್ಯಾಶ್ರಿತಾನ
ಆರ್ತತ್ರಾಣಪರಾಯಣಃ
ಸ ಭಗವಾನ್ ನಾರಾಯಣೋ ಮೇ ಗತಿಃ

ನಿರಂತರ ಭಕ್ತಿಯಿಂದ ಸ್ತೋತ್ರಮಾಡುವ ವರಿಗೆ ತಮ್ಮ ಇಷ್ಟದೇವತೆಯನ್ನು ಸ್ತೋತ್ರ ಮಾಡುವುದೇ ಒಂದು ಸಂತೋಷ. ಅದಕ್ಕೆ ಅವರು ಬೇರೆ ಪ್ರಯೋಜನವನ್ನು ಅಪೇಕ್ಷಿಸುವುದಿಲ್ಲ.

ವರಂ ನ ಯಾಚೆ ರಘುನಾಥ ಯುಷ್ಮತ್
ಪಾದಾಬ್ಜ ಭಕ್ತಿಃ ಸತತಂ ಮಮಾಸ್ತು
ಇಮಂ ಪ್ರಿಯಂ ರಾಮ ವರಂ
ಪುನಶ್ಚ ಪುನಃ ಪುನಃ ಸ್ತ್ವಾ ಮಿದಮೇವ
ಯಾಚೇ

ಹೀಗೆ ಸಂಸ್ಕೃತಸಾಹಿತ್ಯದಲ್ಲಿ ಸ್ತೋತ್ರಕಾವ್ಯವು ತತ್ತ್ವಜ್ಞಾನ, ಸಾಹಿತ್ಯಸೌಂದರ್ಯ ಗೀತ ಮಾಧುರ್ಯವನ್ನು ಪಡೆದು ಉತ್ತಮ ಸಾಹಿತ್ಯ ಪ್ರಕಾರವಾಗಿ ಬೆಳೆದುಬಂದಿದೆ. ಈ ಸ್ತೋತ್ರ ಕಾವ್ಯದ ಪರಿಚಯವನ್ನು ಒಂದು ಮಂಗಲ ಸ್ತೋತ್ರವನ್ನು ಉದಹರಿಸಿ ಮುಗಿಸುವೆವು.

ಮಂಗಲಂ ಬಾಲಕೃಷ್ಣಾಯ
ದಿವ್ಯಲೀಲಾಯ ಮಂಗಲಮ್
ಮಂಗಲಂ ನೀಲವರ್ಣಾಯ
ಮಾತೃಮಾನ್ಯಾಯ ಮಂಗಲಮ್
ಮಂಗಲಂ ಯದುನಾಥಾಯ
ದೀನನಾಥಾಯ ಮಂಗಲಮ್
ಮಂಗಲಂ ವಿಶ್ವರೂಪಾಯ
ಯೋಗಿಧ್ಯೇಯಾಯ ಮಂಗಲಮ್

★

# ಸಂಸ್ಕೃತದಲ್ಲಿ ನಿಘಂಟು-ಕೋಶಗಳು

ನಿಘಂಟುಗಳು ವೇದಕಾಲದಿಂದ ಪ್ರಸಿದ್ಧವಾಗಿವೆ. ವೇದಕಾಲದಲ್ಲಿಯೇ ಕಾಲಕ್ರಮದಲ್ಲಿ ವೇದಗಳ ಕೆಲವು ಶಬ್ದಗಳು ಮುಂದಿನ ಪೀಳಿಗೆಯವರಿಗೆ ಅರ್ಥವಾಗದಷ್ಟು ಕ್ಲಿಷ್ಟವಾಗುತ್ತ ಬರಲು ಅವುಗಳನ್ನೆಲ್ಲ ಪೃಥಕ್ಕರಿಸಿ ಪ್ರತ್ಯೇಕವಾದ ಪದಸಂಗ್ರಹವನ್ನು ಕೂಡಿಸಿದರು. ಇದಕ್ಕೆ 'ನಿಘಂಟು' ಎಂದು ಹೆಸರು. ಈ ಸಂಗ್ರಹ ಮಾಡಿದುದು ವೇದಮಂತ್ರಗಳ ಅರ್ಥಪರಿಜ್ಞಾನಕ್ಕಾಗಿಯೇ. ಇದಕ್ಕೆ ಭಾಷ್ಯವೇ ನಿರುಕ್ತ. ನಿಘಂಟು ಮತ್ತು ನಿರುಕ್ತ ಒಟ್ಟಿಗೆ ಸೇರಿ ವೇದಾಂಗವೆಂದು ಪರಿಗಣಿತವಾಗಿವೆ. ನಿರುಕ್ತಗಳಲ್ಲಿ ಯಾಸ್ಕರ ಗ್ರಂಥವೇ ಈಗ ಉಪಲಬ್ಧವಾಗಿರುವವುಗಳಲ್ಲಿ ಪ್ರಾಚೀನವಾದುದು. ಯಾಸ್ಕರಿಗೆ ಆಧಾರವಾಗಿದ್ದ ನಿಘಂಟನ್ನು ಹಿಂದಿನ ಔಪಮನ್ಯವೋ ಕಶ್ಯಪರೊ ರಚಿಸಿರಬೇಕು. ಇಂತಹವರೆಂದು ಸ್ಪಷ್ಟವಾಗಿ ತಿಳಿಸಲು ಸಾಧ್ಯವಿಲ್ಲ. ಯಾಸ್ಕರು ತಾವು ಉಪಯೋಗಿಸಿಕೊಂಡಿರುವ ನಿಘಂಟುವಿನಲ್ಲಿರುವ ಪದ ಸಮನ್ವಯವನ್ನು ನೈಘಂಟುಕ ಕಾಂಡ, ನೈಗಮ ಕಾಂಡ, ದೈವತಕಾಂಡ–ಎಂದು ಮೂರು ಭಾಗ ಮಾಡಿ ಮೊದಲನೆಯದರಲ್ಲಿ ಏಕಾರ್ಥವಾಚಿಗಳಾದ ಅನೇಕ ಶಬ್ದಗಳ ಗಣಗಳನ್ನೂ, ಎರಡನೆಯದರಲ್ಲಿ ಏಕಾರ್ಥವಾಚಿಯಾದ ಬಿಡಿಶಬ್ದಗಳ ಸಂಗ್ರಹವನ್ನೂ, ಮೂರನೆಯದರಲ್ಲಿ ಅನೇಕಾನೇಕ ದೇವತೆಗಳ ನಾಮಸಂಗ್ರಹವನ್ನೂ ಮಾಡಿದ್ದಾರೆ.

ಆದುದರಿಂದ ನಿರುಕ್ತದ ಭಾಗವಾಗಿರತಕ್ಕ ನಿಘಂಟೇ ಈಗ ಸಿಕ್ಕಿರುವವುಗಳಲ್ಲಿ ಮೊದಲನೆಯದು. ಆದರೆ ಕಾತ್ಯಾಯನನ 'ನಾಮಮಾಲಾ', ವಾಚಸ್ಪತಿ ಮತ್ತು ವಿಕ್ರಮಾದಿತ್ಯರ 'ಶಬ್ದಾರ್ಣವ', ಮತ್ತು 'ಸಂಸಾರಾವರ್ತ', ವ್ಯಾಡಿಯ 'ಉತ್ಪಲಿನಿ',–ಇವುಗಳು ಆದಿಕಾಲದ ನಿಘಂಟುಗಳೆಂದು ಸೂಚಿತವಾಗಿವೆ. ಆದರೆ ಇವುಗಳಾವುವೂ ಈಗ ಉಪಲಬ್ಧವಾಗಿಲ್ಲ. ಇತ್ತೀಚೆಗೆ ಲೌಕಿಕ ಸಾಹಿತ್ಯದಲ್ಲಿ ಕೋಶಗಳೆಂಬ ಶಬ್ದ ಸಂಗ್ರಹ ಗ್ರಂಥಗಳು ಉದ್ಭವವಾಗಿವೆ. ನಿಘಂಟುಗಳಿಗೂ ಕೋಶಗಳಿಗೂ ಸ್ವರೂಪ, ಉದ್ದೇಶ ಫಲಗಳಲ್ಲಿ ಬಹಳ ವ್ಯತ್ಯಾಸವಿದೆ. ನಿಘಂಟುಗಳು ವೇದಗಳ ಕಠಿಣ ಶಬ್ದಗಳ ವಿವರಣೆಗಾಗಿ ಮಾತ್ರ ಸಂಗ್ರಹೀತವಾದುವು. ಕೋಶಗಳು ಮುಂದಿನ ಕವಿಗಳ ಕೃತಿ ರಚನೆಗೆ ಸಹಾಯವಾಗುವುದಕ್ಕಾಗಿ ರಚಿತವಾದುವು. ನಿಘಂಟುವಿನಲ್ಲಿ ನಾಮಪದಗಳೇ ಅಲ್ಲದೆ ಧಾತುಗಳ ವಿವರಣೆಗಳೂ ಇವೆ. ಕೋಶಗಳಲ್ಲಾದರೋ ನಾಮಪದ ಮತ್ತು ಅವ್ಯಯಗಳು ಮಾತ್ರ ಸೇರಿಸಲ್ಪಟ್ಟಿವೆ. ನಿಘಂಟು ಒಂದು ಪ್ರತ್ಯೇಕ ಗ್ರಂಥರಾಶಿಗೆ ಸಂಬಂಧಪಟ್ಟದು, ಕೋಶಗಳು ಹತ್ತಾರು ಗ್ರಂಥಗಳ ಆಧಾರದ ಮೇಲೆ ರಚಿತವಾದುವು. ಅಲ್ಲದೆ ಕೋಶಗಳೆಲ್ಲ ಜ್ಞಾಪಕದಲ್ಲಿಡಲು ಸುಲಭವಾಗಿರುವ ಹಾಗೆ ಶ್ಲೋಕಗಳಲ್ಲಿ ಪದ್ಯಮಯವಾಗಿವೆ. ಸಮಾನಾರ್ಥಕ ಏಕಾರ್ಥಕ ನಾನಾರ್ಥಕಗಳೆಂಬ ಭಾಗಗಳಾಗಿವೆ. ಆದರೆ ಎಲ್ಲ ಸಮಾನಾರ್ಥಕ ಕೋಶಗಳೂ ಸಾಮಾನ್ಯವಾಗಿ ಅನೇಕಾರ್ಥಪ್ರಕರಣವನ್ನು ಅನುಬಂಧವಾಗಿ ಸೇರಿಸಿರುತ್ತವೆ. ಕಂಠಪಾಠವೇ ಮುಖ್ಯದೃಷ್ಟಿಯಾಗಿರುವುದರಿಂದ ಕೋಶಗಳು ಅಕಾರಾದಿಯಾಗಿರಬೇಕಾಗಿಲ್ಲ. ಅವು ಭಿನ್ನ ದೃಷ್ಟಿಯಿಂದ ರಚಿತವಾಗಿವೆ. ಆದ್ಯಕ್ಷರ, ಅಂತ್ಯಾಕ್ಷರ, ವರ್ಣಸಂಖ್ಯಾ, ಪ್ರತ್ಯಯಾಂತ ಅಥವಾ ಲಿಂಗಾನುಸಾರವಾಗಿ ಅವು ರಚಿತವಾಗಿರಬಹುದು. ಸಮಾನಾರ್ಥಕ ಕೋಶಗಳೆಲ್ಲ ಸಾಮಾನ್ಯವಾಗಿ ಪ್ರಥಮಾ ವಿಭಕ್ತಿಯಲ್ಲಿ ಉಕ್ತವಾಗಿರುತ್ತವೆ. ಕಾಲಕ್ರಮದಲ್ಲಿ ಈ ಕೋಶಗಳೂ ರೂಢಿಯಾಗಿ ನಿಘಂಟೆಂಬ ಹೆಸರಿನಿಂದಲೇ ಸೂಚಿತವಾಗುತ್ತಿವೆ.

ಈಗ ಉಪಲಬ್ಧವಾಗಿರುವ ಕೋಶಗಳಲ್ಲಿ ಅಮರಸಿಂಹನ 'ಅಮರಕೋಶ' ಅಥವಾ 'ನಾಮಲಿಂಗಾನುಶಾಸನ'ವೇ ಪ್ರಾಚೀನವೂ ಆಧಾರಭೂತವೂ ಆದುದು. ಅಮರ ವ್ಯಾಖ್ಯಾಕಾರರಾದ ಕ್ಷೀರಸ್ವಾಮಿ, ಸರ್ವಾನಂದ ಇವರುಗಳಿಂದ ಅಮರಸಿಂಹನಿಗಿಂತ ಹಿಂದೆ ವ್ಯಾಡಿ, ಧನ್ವಂತರಿ, ವರರುಚಿ, ಕಾತ್ಯಾ ಅಥವಾ ಕಾತ್ಯಾಯನ, ವಾಚಸ್ಪತಿ ಮೊದಲಾದ ನಿಘಂಟುಕಾರರೂ 'ತ್ರಿಕಾಂಡ', 'ಉತ್ಪಲಿಂಗ', 'ಮಾಲಾ' ಎಂಬ ನಿಘಂಟುಗಳೂ ಇದ್ದುವೆಂದು ತಿಳಿದು ಬರುತ್ತದೆ. ಅಮರಸಿಂಹನೂ ಪಾಣಿನಿಯಂತೆಯೇ ಹಿಂದಿನ ಕೃತಿಕಾರರನ್ನೆಲ್ಲ ಮೂಲೆಗೊತ್ತಿದನು. ಇವನು ವಿಕ್ರಮಾದಿತ್ಯನ ನವಮಣಿಗಳಲ್ಲೊಬ್ಬನೆಂದು ಪರಿಗಣಿತನಾಗಿದ್ದಾನೆ. ಇದರಿಂದ ಈತನ ಕಾಲವೇನೂ ನಿರ್ಣಯವಾಗುವುದಿಲ್ಲ. ಈತನು ಮಹಾಯಾನ ಪಂಥದ ಬೌದ್ಧನಾಗಿರಬೇಕು. ಈತನ ಕಾಲವು ಎಂಟನೆಯ ಶತಮಾನಕ್ಕೆ ಹಿಂದಿನದೆಂದು ಹೇಳಬಹುದು.

'ನಾಮಲಿಂಗಾನುಶಾಸನ'ವು ಮೂರು ಕಾಂಡಗಳಾಗಿ ವಿಭಾಗವಾಗಿದೆ. ಒಂದೊಂದು ಕಾಂಡವೂ ವಿಷಯಾನುಗುಣವಾಗಿ ವರ್ಗಗಳಾಗಿ ವಿಭಾಗವಾಗಿವೆ. ಮೊದಲನೆಯ ಕಾಂಡದಲ್ಲಿ ಸ್ವರ್ಗ, ವ್ಯೋಮ, ದಿಕ್, ಕಾಲ, ಧೀ, ಶಬ್ದ, ನಾಟ್ಯ, ಪಾತಾಲ ಭೋಗಿ, ನರಕ, ವಾರಿ, ಎಂಬ ಹತ್ತು ವರ್ಗಗಳೂ, ಎರಡನೆಯ ಕಾಂಡದಲ್ಲಿ ಭೂಮಿ, ಪುರ, ಶೈಲ, ವನೌಷಧಿ, ಸಿಂಹಾದಿ, ಮನುಷ್ಯ, ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಹತ್ತು ವರ್ಗಗಳೂ ಕೊನೆಯ ಕಾಂಡದಲ್ಲಿ ವಿಶೇಷ್ಯವಿಘ್ನ ಸಂಕೀರ್ಣ, ನಾನಾರ್ಥ, ಅವ್ಯಯ ಲಿಂಗಾದಿ ಸಂಗ್ರಹವೆಂಬ ಆಯು ವರ್ಗಗಳೂ ಇವೆ. ಸಮಾನಾರ್ಥಕ ಪದಗಳ ಜೋಡಣೆಯೂ ಉಕ್ತಿ ರೀತಿಯೂ ಬಹು ಸರಳವೂ ಆಕರ್ಷಕವೂ ಆಗಿವೆ.

'ಅಮರಕೋಶವು' ಬಹು ಜನಪ್ರಿಯವಾದುದು ಇದಕ್ಕೆ ಅಸಂಖ್ಯಾತ, ವ್ಯಾಖ್ಯಾನಗಳಿವೆ. ಅವುಗಳಲ್ಲಿ ಕ್ಷೀರಸ್ವಾಮಿ ಕೃತ 'ಉದ್ಘಾಟನ' ಪ್ರಾಚೀನತಮವಾದುದು. ಈ ವ್ಯಾಖ್ಯಾನವು ಸರಳವೂ ಸುಲಭವೂ ಆಗಿರುವುದಲ್ಲದೆ ಪ್ರಾಚೀನವಾದ ಒಂದು ನೂರು ಆಕರಗಳ ಆಧಾರದ ಮೇಲೆ ಗ್ರಂಥವನ್ನು ವಿಮರ್ಶಿಸಿದೆ. 'ಕ್ಷೀರಸ್ವಾಮಿ'ಯು ರಾಜಶೇಖರ ಮತ್ತು ಭೋಜರನ್ನು ಅನುವಾದ ಮಾಡಿದ್ದಾನೆ. ವರ್ಧಮಾನನಿಂದ 'ಗುಣರತ್ನ ಮಹೋದಧಿ'ಯಲ್ಲಿಯೂ ಸೂಚಿತನಾಗಿದ್ದಾನೆ. ಇವನು ಹನ್ನೊಂದನೆಯ ಶತಮಾನದವನಿದ್ದಿರಬೇಕು. ಗೌಡ ಉಪಾಧ್ಯಾಯ, ಗಿರಿಭೋಜರು ಇವನಿಂದ ಉಕ್ತರಾದ ಪ್ರಾಚೀನ ವ್ಯಾಖ್ಯಾನಕಾರರು. 'ಅಮರಕೋಶ'ದ ಇತ್ತೀಚಿನ ವ್ಯಾಖ್ಯಾನಗಳಲ್ಲಿ ಸರ್ವಾನಂದನ 'ಟೀಕಾಸರ್ವಸ್ವ' (೧೧೫೯) ಸುಭೂತಿಯ 'ಕಾಮಧೇನು' ಬೃಹಸ್ಪತಿರಾಯ ಮುಕುಟನ 'ಪದಚಂದ್ರಿಕಾ' (೧೪೩೧) ಮೊದಲಾದವು ಮುಖ್ಯವಾದುವು. 'ಟೀಕಾ ಸರ್ವಸ್ವ'ವು ಪಾಂಡಿತ್ಯಪೂರ್ಣವೂ ಬಹು ಉಪಯುಕ್ತವೂ ಆಗಿರುವುದಲ್ಲದೆ ಹತ್ತು ಪ್ರಾಚೀನ ವ್ಯಾಖ್ಯಾನಗಳ ಆಧಾರದಿಂದ ರಚಿತವಾಗಿದೆ. ಮುಂದಿನ ರಾಯಮುಕುಟನೇ ಮೊದಲಾದ ಎಲ್ಲ ವಂಗದೇಶದ ವ್ಯಾಖ್ಯಾನಕಾರರಿಗೂ ಇದೇ ಆಧಾರ ಗ್ರಂಥ.

**ಡಾ॥ ಎನ್. ಅನಂತರಂಗಾಚಾರ್**

ಈಚೆಗೆ ನಾರಾಯಣ ಶರ್ಮ (೧೬೧೯) ರಾಮನಾಥ ವಿದ್ಯಾವಾಚಸ್ಪತಿ, (೧೬೩೩) ಮಥುರೇಶ ವಿದ್ಯಾಲಂಕಾರ (೧೬೬೬) ಮಹಾದೇವ ಮಹೇಶ್ವರ ಮೊದಲಾದವರೂ ಅಮರವ್ಯಾಖ್ಯಾನವನ್ನು ರಚಿಸಿದ್ದಾರೆ. ಮಹೇಶ್ವರನ ಟೀಕೆಯಲ್ಲಿ ಪ್ರಾಚೀನವಾದ ೮೦ ಕೋಶ ಮತ್ತು ಕೋಶಕಾರರ ಸೂಚನೆಯಿದೆ. ಅಮರ ಕವಿಯ ಸಮಕಾಲೀನನಾಗಿಯೇ ಶಾಶ್ವತನು ತನ್ನ 'ಅನೇಕಾರ್ಥ ಸಮುಚ್ಚಯ'ವನ್ನು ರಚಿಸಿದ್ದಾನೆ. ಅಗ್ನಿಪುರಾಣದ ನಿಘಂಟುವಿನ ಭಾಗವು 'ಅಮರ ಕೋಶ'ದ ರೂಪಾಂತರವಾದ ಸಂಗ್ರಹ ಮಾತ್ರ. 'ಧನ್ವಂತರೀ ನಿಘಂಟು'ವಿನ ಮೂಲ ಬಹುಶಃ ಅಮರ ಸಿಂಹನಿಗಿಂತ ಪ್ರಾಚೀವಾಗಿದ್ದಿರಬಹುದಾದರೂ, ಈಗಿರುವ ಗ್ರಂಥವು ಈಚಿನದು.

ಎಂಟನೆಯ ಶತಮಾನದಲ್ಲಿ 'ರಾಘವಪಾಂಡವೀಯ'ದ ಕರ್ತೃವಾದ ಜೈನ ಧನಂಜಯನು 'ನಾಮಮಾಲಾ' ಮತ್ತು 'ನಿಘಂಟು ಸಮಯ' ಎಂಬ ಎರಡು ಗ್ರಂಥಗಳನ್ನು ರಚಿಸಿದನು. ಇದೇ ಕಾಲದಲ್ಲಿ ದುರ್ಗಸಿಂಹನು 'ಲಿಂಗಾನುಶಾಸನ'ವನ್ನು ರಚಿಸಿದ. ಇತರ ಗ್ರಂಥಗಳ ಉಕ್ತಿಯ ಆಧಾರದ ಮೇಲೆ 'ಅಭಿಧಾನ ನಾಮಮಾಲಾ' ಎಂಬ ಮತ್ತೊಂದು ಕೋಶವು ಈ ಕಾಲದಲ್ಲಿ ರಚಿತವಾಗಿರಬೇಕೆಂದು ತೋರುತ್ತದೆ.

ಹತ್ತನೆಯ ಶತಮಾನದಲ್ಲಿದ್ದ 'ಕವಿರಹಸ್ಯ'ದ ಕರ್ತೃವಾದ ಹಲಾಯುಧನು 'ಅಭಿಧಾನ ರತ್ನಮಾಲೆ'ಯ ಕರ್ತೃ. ಧಾರಾನಗರದ ಭೋಜನು (೧೦೦೫–೧೦೫೪) 'ನಾಮಮಾಲಿಕೆ'ಯನ್ನು ರಚಿಸಿದನು. ಕಾಂಚೀಪುರದ ಯಾದವಪ್ರಕಾಶನು 'ವೈಜಯಂತಿ' ಎಂಬ ಕೊಶವನ್ನು ರಚಿಸಿದ್ದಾನೆ. ಈತನು ಮೊದಲು ರಾಮಾನುಜಾಚಾರ್ಯರ ಗುರುವೂ ಅನಂತರ ಶಿಷ್ಯನೂ ಆಗಿದ್ದವನು. 'ವೈಜಯಂತಿ'ಯು ಸಮಾನಾರ್ಥಕ ಮತ್ತು ನಾನಾರ್ಥಕವೆಂಬ ಎರಡು ಭಾಗವಾಗಿದೆ. 'ಅಮರ ಕೋಶ'ಕ್ಕಿಂತ ಹೆಚ್ಚು ವಿಸ್ತಾರವೂ ಸಂಪೂರ್ಣವೂ ಆಗಿದೆ. ಅನೇಕಾರ್ಥ ಭಾಗವು ವರ್ಣಾನುಕ್ರಮದಲ್ಲಿ ಏಕಾಕ್ಷರ, ದ್ವ್ಯಕ್ಷರ ಮತ್ತು ಅನೇಕಾಕ್ಷರಗಳೆಂಬ ಮೂರು ಕಾಂಡಗಳಾಗಿ ಭಾಗವಾಗಿದೆ. ಬೌದ್ಧನಾದ ಪುರುಷೋತ್ತಮದೇವನೆಂಬುವನು 'ತ್ರಿಕಾಂಡಶೇಷ', 'ಹಾರಾವಳೀ' ಮತ್ತು ವರ್ಣದೇಶನಾ' ಎಂಬ ಮೂರು ಕೋಶಗಳನ್ನು ರಚಿಸಿದ್ದಾನೆ. ತ್ರಿಕಾಂಡ ಶೇಷವು ಅಮರಕೋಶದ ಅನುಬಂಧ, ೧೦೫೦ ಶ್ಲೋಕಗಳಿಂದ ಕೂಡಿದ ಮೂರು ಭಾಗಗಳಾಗಿವೆ. 'ಅಮರ ಕೋಶ'ದ ಪರಿಭಾಷೆಯಲ್ಲಿಯೇ ವಿಭಾಗಗಳನ್ನು ಅಂಗೀಕರಿಸಿ, ಅಲ್ಲಿ ಬಿಟ್ಟು ಹೋಗಿರುವ ಶಬ್ದಗಳನ್ನು ಮಾತ್ರ ಕೊಡುತ್ತವೆ. 'ಹಾರಾವಳಿಯು' ೨೭೮ ಶ್ಲೋಕಗಳಲ್ಲಿ ಎರಡುಭಾಗವಾಗಿ ಅಪೂರ್ವವಾದ ಸಮಾನಾರ್ಥಕ ಮತ್ತು ನಾನಾರ್ಥಕ ಶಬ್ದಗಳನ್ನು ನಿರೂಪಿಸುತ್ತದೆ. ಗದ್ಯದಲ್ಲಿರುವ 'ವರ್ಣದೇಶನ' ಅಕ್ಷರೋಚ್ಚಾರಣೆಗೆ ಸಂಬಂಧಪಟ್ಟದ್ದು. 'ಏಕಾಕ್ಷರ ಕೋಶ' ಮತ್ತು 'ದ್ವಿರೂಪಕೋಶ'ಗಳೆಂಬ ಮತ್ತೆರಡು ಕೋಶಗಳೂ ಏತತ್ಕೃತವೆಂದು ಸೂಚಿತವಾಗಿವೆ. ಈತನು ೧೨ನೆಯ ಶತಮಾನದ ಪೂರ್ವಾರ್ಧದಲ್ಲಿದ್ದಿರಬೇಕು.

'ವಿಶ್ವಪ್ರಕಾಶ' ಮತ್ತು 'ಅನೇಕಾರ್ಥಕೋಶ'ಗಳು ಅಂತ್ಯ ವರ್ಣಾನುಕ್ರಮದಲ್ಲಿ ರಚಿತವಾಗಿರುವ ನಿಘಂಟುಗಳು. 'ವಿಶ್ವಪ್ರಕಾಶ'ವು ೧೧೧೧ ರಲ್ಲಿ ಮಹೇಶ್ವರನಿಂದ ರಚಿತವಾದುದು. ಮಹೇಶ್ವರನು ಬ್ರಹ್ಮನೆಂಬುವನ ಪುತ್ರ, ಕೃಷ್ಣನ ಪೌತ್ರ. ಹೇಮಚಂದ್ರನ ಅನುವಾದಗಳಿಂದ ಇವನ ಗ್ರಂಥವು ಅವನ ಕಾಲದಲ್ಲಿಯೇ ವಿಶೇಷ ಪ್ರಖ್ಯಾತಿಯನ್ನು ಪಡೆದಿತ್ತೆಂದು ತಿಳಿಯಬಹುದಾಗಿದೆ. 'ಶ್ರೀಕಂಠಚರಿತ'ದ ಕರ್ತೃವಾದ ಮಂಖನು ಕಾಶ್ಮೀರದ ಜಯಸಿಂಹನ (೧೧೨೮–೫೫) ಆಶ್ರಯದಲ್ಲಿ 'ಅನೇಕಾರ್ಥ ಶಬ್ದಕೋಶ' ವನ್ನು ರಚಿಸಿದನು. ಮೇದಿನೀ ಕರನಿಂದ ರಚಿತವಾದ 'ಅನೇಕಾರ್ಥ ಶಬ್ದ ಕೋಶ'ವು 'ವಿಶ್ವಪ್ರಕಾಶ'ದ ರೂಪಾಂತರ ಮಾತ್ರ. ಇದರಲ್ಲಿ ಉದಹರಿಸಿರುವವರೆಲ್ಲ ಸರ್ವಾನಂದ ನಿಂದ ಅನುವದಿತರಾಗಿರುವುದರಿಂದ ಇದು ೧೨ ನೆಯ ಶತಮಾನದಲ್ಲಿ ರಚಿತವಾಗಿರಬೇಕು. ಅಜಯಪಾಲನ 'ನಾನಾರ್ಥ ಸಂಗ್ರಹವು', 'ಶಾಶ್ವತಕೋಶ'ದಲ್ಲಿ ಉಕ್ತವಾಗಿರುವ ೧೮೩೦ ಶಬ್ದಗಳ ವರ್ಣಾನುಕ್ರಮವಾದ ಸಂಗ್ರಹ. ಅಜಯಪಾಲನು ಜೈನ ಸರ್ವಾನಂದನ 'ಗುಣರತ್ನ ಮಹೋದಧಿ'ಯಲ್ಲಿ ಉಕ್ತನಾಗಿದ್ದಾನೆ. ಕೇಶವ ಸ್ವಾಮಿಯಿಂದಲೂ ಸೂಚಿತನಾಗಿದ್ದಾನೆ. ಕೇಶವಸ್ವಾಮಿಯ 'ನಾನಾರ್ಥಾರ್ಣವ ಸಂಕ್ಷೇಪ'ವು ೫೮೦೦ ಶ್ಲೋಕಗಳಿಂದ ಕೂಡಿದೆ. ಇದುವರೆಗೆ ಉಪಲಬ್ಧವಾಗಿರುವ ಎಲ್ಲ ಕೋಶಗಳಿಗಿಂತ ದೊಡ್ಡದಾದ ಬೃಹತ್ಕೋಶ. ವರ್ಣಸಂಖ್ಯೆಯ ಆಧಾರದ ಮೇಲೆ ಆರುಭಾಗಗಳಾಗಿವೆ. ಶಬ್ದಗಳು ವರ್ಣಾನುಕ್ರಮದಲ್ಲಿವೆ. ಈತನ ಆಶ್ರಯದಾತ ಕುಲೋತ್ತುಂಗ ಚೋಳನ ಮಗನಾದ ರಾಜರಾಜ ಚೋಳ.

ಬಹು ಗ್ರಂಥಕಾರನಾದ ಗುಜರಾತಿನ ಹೇಮಚಂದ್ರನು 'ಅಭಿಧಾನ ಚಿಂತಾಮಣಿ' 'ಅನೇಕಾರ್ಥ ಸಂಗ್ರಹ', 'ನಿಘಂಟುಶೇಷ' ಮತ್ತು 'ದೇಶೀ ನಾಮಮಾಲಾ' ಎಂಬ ನಾಲ್ಕು ನಿಘಂಟುಗಳನ್ನು ರಚಿಸಿದ್ದಾನೆ. ಮೊದಲೆರಡೂ ಸಮಾನಾರ್ಥಕ ಮತ್ತು ಅನೇಕಾರ್ಥಕ ಶಬ್ದಗಳನ್ನು ಕುರಿತವು. ಮೂರನೆಯದು ಒಂದು ಓಷಧಿಕೋಶ, ಕೊನೆಯದು ಪ್ರಾಕೃತ ನಿಘಂಟು. 'ಅಭಿಧಾನ ಚಿಂತಾಮಣಿ'ಯು ೧೫೪೨ ಶ್ಲೋಕಗಳಲ್ಲಿ ದೇವಾದಿದೇವ, ದೇವ, ಮರ್ತ್ಯ, ನಾರಕ, ಸಾಮಾನ್ಯ ಮತ್ತು ಅವ್ಯಯ–ಎಂಬ ಆರು ಕಾಂಡಗಳಾಗಿ ಭಾಗವಾಗಿವೆ. ಕೋಶಕಾರನ ಸ್ವವ್ಯಾಖ್ಯಾನದಿಂದ ಕೂಡಿದೆ. 'ಅನೇಕಾರ್ಥ ಸಂಗ್ರಹ'ವೂ ಅದೇ ಆರು ಕಾಂಡಗಳಿಂದ ಕೂಡಿ ಶಬ್ದಗಳನ್ನು ಆದ್ಯಂತಾಕ್ಷರಗಳ ವರ್ಣಾನುಕ್ರಮದಲ್ಲಿ ಜೋಡಿಸಿದೆ. ಹೇಮಚಂದ್ರನಾದ ಮೇಲೆ ಮಹೀಪನೆಂಬುವನು 'ಅನೇಕಾರ್ಥ ತಿಲಕ'ವೆಂಬ ಕೋಶವನ್ನು ರಚಿಸಿದನು. ಸುಮಾರು ಹದಿಮೂರನೆಯ ಶತಮಾನದಲ್ಲಿಯೇ ಭಟ್ಟಮಲ್ಲನೆಂಬುವನು 'ಆಖ್ಯಾತ ಚಂದ್ರಿಕೆ' ಎಂಬ ಏಕಾರ್ಥ ಧಾತುಗಳ ಕೋಶವನ್ನು ರಚಿಸಿದ್ದಾನೆ

ಹದಿನಾಲ್ಕನೆಯ ಶತಮಾನದಲ್ಲಿ 'ಸುಧಾಕರ'ನೆಂಬುವನು 'ಏಕಾಕ್ಷರನಾಮಮಾಲಾ' ಎಂಬ ಮತ್ತೊಂದು ಕೋಶವನ್ನೂ ರಚಿಸಿದನು. ವ್ಯಾಕರಣಶಾಸ್ತ್ರದ ಸೌಪದ್ಮಶಾಖೆಯ ಪ್ರವರ್ತಕನಾದ ಪದ್ಮನಾಭಭಟ್ಟನು ತನ್ನ 'ಭೂರಿ ಪ್ರಯೋಗ'ದಲ್ಲಿ ಸಮಾನಾರ್ಥಕ ಮತ್ತು ಏಕಾರ್ಥಕ ಶಬ್ದಗಳ ವಿವರಣೆಯನ್ನಿತ್ತಿದ್ದಾನೆ. ಹೇಮಚಂದ್ರನ ಮಾರ್ಗಾನುಯಾಯಿಯಾದ ಶುಭಶೀಲ ಗಣಿಯು 'ಪಂಚವರ್ಗನಾಮ ಸಂಗ್ರಹ' ಮತ್ತು 'ಉಣಾದಿನಾಮಮಾಲಾ' ಎಂಬ ಕೋಶಗಳ ಕರ್ತೃ. ವಿಜಯನಗರದ ಇಮ್ಮಡಿ ಹರಿಹರನ ಆಶ್ರಿತನಾದ ಇರುಗಪ್ಪ ದಂಡಾಧಿನಾಥನು 'ನಾನಾರ್ಥ ರತ್ನಮಾಲಾ' ಎಂಬ ಕೋಶವನ್ನು ಇದೇ ಕಾಲದಲ್ಲಿ ಸಿದ್ಧಪಡಿಸಿದನು. ಅಮರಕೋಶದ ಪ್ರಖ್ಯಾತ ವ್ಯಾಖ್ಯಾನಕಾರನಾದ ಬೃಹಸ್ಪತಿ ರಾಯ ಮಕುಟನೂ ಈ ಕಾಲದವನೇ. 'ಶಬ್ದ ಚಂದ್ರಿಕಾ' ಮತ್ತು 'ಶಬ್ದರತ್ನಾಕರ' ಎಂಬುವು ವಾಮನಭಟ್ಟಬಾಣನ ವಿರಚಿತವಾದುದೆಂದು ಪ್ರತೀತಿಯಿದೆ. ಮದನ ಪಾಲನಿಂದ ಕ್ರಿ.ಶ. ೧೩೭೦ ರಲ್ಲಿ ರಚಿತವಾದ 'ಮದನಪಾಲನಿಘಂಟು' ಒಂದು ಓಷಧಿ ಕೋಶ. ೧೪ ವರ್ಗಗಳನ್ನೂ ೨೨೫೦ ಶ್ಲೋಕಗಳನ್ನೂ ಉಳ್ಳದ್ದು. ಇದರಲ್ಲಿ ಅನೇಕ ಮಾಂಸಾಹಾರ ಪ್ರಭೇದಗಳು ಉಕ್ತವಾಗಿವೆ.

೧೬ನೆಯ ಶತಮಾನದಲ್ಲಿ ಅಪ್ಪಯ್ಯ ದೀಕ್ಷಿತನು 'ನಾಮಸಂಗ್ರಹಮಾಲಾ' ಎಂಬ ಕೋಶವನ್ನು ರಚಿಸಿರುವಂತೆ ಪ್ರತೀತಿ. ಕೇಶವ ದೈವಜ್ಞನು 'ಕಲ್ಪದ್ರು'ವನ್ನು ರಚಿಸಿದುದು ಈ ಕಾಲದಲ್ಲಿಯೇ. ಕಾಲ ಕರ್ತೃ ನಿರ್ಣಯವಿಲ್ಲದ ಅನೇಕ ವೈದ್ಯ, ಖಗೋಳ ಮತ್ತು ಜ್ಯೋತಿಷ ನಿಘಂಟುಗಳು ಹೇರಳವಾಗಿವೆ. 'ತಿಲಕ ಮಂಜರಿ'ಯ ಕರ್ತೃವಾದ ಧನಪಾಲನು (೧೦೦೦) 'ಪಾಇಯಲಚ್ಛೀ' ಎಂಬ ಪ್ರಾಕೃತ ಕೋಶವನ್ನು ರಚಿಸಿದ್ದಾನೆ. ೧೬೪೩ ರಲ್ಲಿ ವೇದಾಂಗರಾಯ ನೆಂಬುವನು 'ಪಾರಸೀಪ್ರಕಾಶ'

(30ನೇ ಪುಟ ನೋಡಿ)

(ಮುಂದಿನ ಪುಟಗಳಲ್ಲಿನ ಪಕ್ಷಿನೋಟವನ್ನೂ ಗಮನಿಸಿ.)

# ನಿಘಂಟು ಕೋಶಗಳ ಪಕ್ಷಿನೋಟ

ಸಂಸ್ಕೃತ ಸಾಹಿತ್ಯ ರಾಶಿಯಲ್ಲಿ ಈಗ ಪರಿಚಿತವಾಗಿರುವ ನಿಘಂಟುಗಳ ಸಂಖ್ಯೆ ೨೦೦ಕ್ಕೂ ಮೀರಿವೆ. ಅವುಗಳಲ್ಲಿ ಅನೇಕವು ಅನುಪಲಬ್ಧವಾಗಿವೆ. ಮುದ್ರಿತವಾಗಿರುವುವು ಸುಮಾರು ೨೫ ಮಾತ್ರ, ಪಕ್ಷಿನೋಟದ ಪರಿಚಯಕ್ಕಾಗಿ ಅದರ ಸ್ಥೂಲವಾದ ಅಕಾರಾದಿ ಪಟ್ಟಿಯನ್ನು ಮುಂದೆ ಕೊಟ್ಟಿದೆ.

೧. ಅಖ್ಯಾತಚಂದ್ರಿಕೆ : ಭಟ್ಟಮಲ್ಲಕೃತ–೧೩ನೆಯ ಶತಮಾನ

೨. ಅಗ್ನಿಪುರಾಣ : ನಿಘಂಟು – ಬಹುಮಟ್ಟಿಗೆ ಅಮರಕೋಶದ ಆಧಾರದಮೇಲೆ ರಚಿತವಾದುದು

೩. ಅನೇಕಾರ್ಥಕೋಶ: ಮಂಖಕೃತ (ಕಾಶ್ಮೀರಕೋಶ) ೧೦೦೭ ಶ್ಲೋಕ ಸಂಖ್ಯೆಯನ್ನುಳ್ಳದು.

೪. ಅನೇಕಾರ್ಥಧ್ವನಿ ಮಂಜರಿ : ಮಹಾಕ್ಷಪಣಕ ಕೃತ ೩ ಅಧಿಕಾರವನ್ನುಳ್ಳದ್ದು.

೫. ಅನೇಕಾರ್ಥಧ್ವನಿ ಮಂಜರಿ : ಗದಾಸಿಂಹಕೃತ (ದುರ್ಗಸಿಂಹ) ೮೮ಶ್ಲೋಕಗಳು–ಪರ್ಯಾಯಕೋಶ.

೬. ಅನೇಕಾರ್ಥ ಸಂಗ್ರಹ : ಹೇಮಚಂದ್ರಕೃತ, ೧೮೨೯ ಶ್ಲೋಕಗಳು– ಆರುಕಾಂಡವನ್ನುಳ್ಳದ್ದು. ಅಕಾರಾದಿ ಕ್ರಮದಲ್ಲಿದೆ.

೭. ಅನೇಕಾರ್ಥ ಸಂಗ್ರಹ : ಅಜಯಪಾಲಕೃತ (೧೨ನೆಯ ಶತಮಾನ) ಶಾಶ್ವತ ನಿಘಂಟಿನ ಸಂಗ್ರಹ–ಅಮುದ್ರಿತ.

೮. ಅನೇಕಾರ್ಥ ಸಮುಚ್ಚಯ : ಶಾಶ್ವತಕೃತ (೧೬ ನೆಯ ಶತಮಾನ) ನಾನಾರ್ಥ ನಿಘಂಟು ೮೦೦ ಅನುಷ್ಟುಪ್ ಶ್ಲೋಕಗಳು.

೯. ಅನೇಕಾರ್ಥಸಾರ : ಧರಣಿದಾಸಕೃತ (೧೨ ನೆಯ ಶತಮಾನ) ಇದರಲ್ಲಿ 'ಕ್ಷ' ಪ್ರತ್ಯೇಕ ವರ್ಣವಾಗಿ ಅಂಗೀಕೃತವಾಗಿದೆ.

೧೦. ಅಭಿಧಾನ ಚಿಂತಾಮಣಿ : ಹೇಮಚಂದ್ರಕೃತ – ಆರುಕಾಂಡಗಳು – ನಾನಾ ವೃತ್ತದ ೧೫೪೨ ಶ್ಲೋಕಗಳು.

೧೧. ಅಭಿಧಾನ ಚಿಂತಾಮಣಿ : ಜಿನದೇವ ಮುನೀಶ್ವರ ಕೃತ ೧೭ ನೆಯ ಶತಮಾನ.

೧೨. ಅಭಿಧಾನ ತಂತ್ರ : ಜಯದೇವಕೃತ–ಇದರಲ್ಲಿ ಅಮರ ಕೋಶದ ಅನೇಕ ಶ್ಲೋಕಗಳು ಉಕ್ತವಾಗಿವೆ.

೧೩. ಅಭಿಧಾನ ರತ್ನಮಾಲಾ : ಭಟ್ಟಹಲಾಯುಧ ಕೃತ–೧೦ ನೆಯ ಶತಮಾನ, ೫ ಕಾಂಡಗಳು ೯೦೦ ಶ್ಲೋಕಗಳು, ನಾನಾರ್ಥಕೋಶ.

ಅಮರ ಪದಮುಕುರ: ರಂಗಾಚಾರ್ಯ ಕೃತ.

೧೪. ಅಮರಕೋಶ (ನಾಮಲಿಂಗಾನುಶಾಸನ) : ಅಮರಸಿಂಹ ಕೃತ.

೧೫. ಅಮರಕೋಶ ವ್ಯಾಖ್ಯಾನ : ಕ್ಷೀರಸ್ವಾಮಿಕೃತ (ಉದ್ಘಾಟನೆ)

೧೬. ಅಮರಕೋಶ ವ್ಯಾಖ್ಯಾನ : ವರ್ಧಮಾನಕೃತ (ಗುಣರತ್ನಕೋಶ).

೧೭. ಅಮರಕೋಶ ವ್ಯಾಖ್ಯಾನ : ಸರ್ವಾನಂದಕೃತ (ಟೀಕಾಸರ್ವಸ್ವ) (೧೧೫೯.)

೧೮. ಅಮರಕೋಶ ವ್ಯಾಖ್ಯಾನ : ಸುಭೂತಿ ಆಚಾರ್ಯ ವಿರಚಿತ.

೧೯. ಅಮರಕೋಶ ವ್ಯಾಖ್ಯಾನ : ಬೃಹಸ್ಪತಿರಾಯ ಮುಕುಟ (ಪದಚಂದ್ರಿಕಾ) (೧೪೩೦.)

೨೦. ಅಮರಕೋಶ ವ್ಯಾಖ್ಯಾನ : ನಾರಾಯಣಶರ್ಮ ಕೃತ–(೧೬೧೯.)

೨೧. ಅಮರಕೋಶ ವ್ಯಾಖ್ಯಾನ : ರಾಮನಾಥ ವಿದ್ಯಾವಾಚಸ್ಪತಿಕೃತ- (೧೬೩೩)

ಅಮರಪದ ತಿಲಕ : ರಂಗಾಚಾರ್ಯ ಕೃತ.

ಅಮರಕೋಶ ಪಂಚಿಕಾ : ನಾರಾಯಣ ಶರ್ಮ.

೨೨. ಅಮರಕೋಶ ವ್ಯಾಖ್ಯಾನ : ಮಥುರೇಶ ವಿದ್ಯಾಲಂಕಾರ ಕೃತ(೧೬೬೬)

೨೩. ಅಮರಕೋಶ ವ್ಯಾಖ್ಯಾನ: ಮಹದೇವ ಮಹೇಶ ಕೃತ.

೨೪. ಅವ್ಯಯಕೋಶ : ಮಹದೇವ ಕೃತ.

೨೫. ಅವ್ಯಯಾರ್ಣವ : ಜಯ ಭಟ್ಟಾರಕ ಕೃತ.

೨೬. ಅನೇಕಾರ್ಥ ಕೋಶ : ಮೇದಿನೀಕರ ಕೃತ (ವಿಶ್ವಪ್ರಕಾಶದ ರೂಪಾಂತರ)

೨೭. ಅನೇಕಾರ್ಥ ತಿಲಕ: ಮಹೀಪ ಕೃತ.

೨೮. ಉಣಾದಿಕೋಶ : ರಾಮಶರ್ಮ ಕೃತ.

೨೯. ಉಣಾದಿನಾಮ ಮಾಲಾ : ಶುಭಶೀಲಗಣಿಕೃತ (೧೫ನೆಯ ಶತಮಾನ)

೩೦. ಉತ್ಪಲಮಾಲಿನಿ : ಶುಭಾಂಗ ಕೃತ.

೩೧. ಉತ್ಪಲಿನಿ : ವ್ಯಾಡಿಕೃತ-ಅಮರಸಿಂಹನಿಗಿಂತ ಪ್ರಾಚೀನ

೩೨. ಊಷ್ಮವಿಶೇಷ : ಗಧಸಿಂಹಕೃತ–೧೧೯ ಶ್ಲೋಕಗಳು.

೩೩. ಉಣಾದಿಕೋಶ : ಮಹಾದೇವ ವೇದಾಂತಿಕೃತ (೧೬ ನೆಯ ಶತಮಾನ).

೩೪. ಏಕವರ್ಣಾರ್ಥ ಸಂಗ್ರಹ : ಭರತಸೇನ ಕೃತ (೧೬ ನೆಯ ಶತಮಾನ) ಏಕಾಕ್ಷರ ನಿಘಂಟು.

೩೫. ಏಕಾಕ್ಷರ ಕೋಶ : ಪುರುಷೋತ್ತಮ ದೇವಕೃತ – ೧೧ ನೆಯ ಶತಮಾನ (ದ್ವಾದಶಕೋಶ ಸಂಗ್ರಹ).

೩೬. ಏಕಾಕ್ಷರ ನೂತನ ನಾಮಮಾಲಾ : ವಿಶ್ವಶಂಭುಕೃತ.

೩೭. ಏಕಾಕ್ಷರ ರತ್ನಮಾಲಾ : ಮಾಧವಕೃತ–೧೩ನೆಯ ಶತಮಾನ (ಸ್ವರ, ವ್ಯಂಜನ ಸಂಯುಕ್ತ ಕಾಂಡಗಳು).

೩೮. ಕಲ್ಪದ್ರುಕೋಶ : ಕೇಶವಕೃತ–(೧೬೬೦), ಪರ್ಯಾಯಪದಗಳ ಬೃಹತ್ಕೋಶ–೪೦೦೦ ಶ್ಲೋಕಗಳು.

೩೯. ಕೋಶಕಲ್ಪತರು : ವಿಶ್ವನಾಥಕೃತ – ಪರ್ಯಾಯ ನಾನಾರ್ಥ ಕೋಶ.

ಕ್ರಿಯಾಕಲಾಪ : ಆಶಾಧರ ಕೃತ.

೪೦. ತ್ರಿಕಾಂಡ : ಭಾಗುರಿ.

೪೧. ತ್ರಿಕಾಂಡ ಚಿಂತಾಮಣಿ : ರಘುನಾಥಚಕ್ರವರ್ತಿ.

ತ್ರಿಕಾಂಡಶೇಷ : ಪುರುಷೋತ್ತಮದೇವ ಕೃತ – ೧೧ ನೆಯ ಶತಮಾನ.

ತ್ರಿಕಾಂಡ ವಿವೇಕ : ರಮಾನಾಥ ವಿದ್ಯಾಚಂದ್ರ.

೪೨. ತ್ರಿರೂಪಕೋಶ : ಬಿಲ್ಹಣ ಕವಿಕೃತ.

೪೩. ದಕ್ಷಿಣಾಮೂರ್ತಿ ನಿಘಂಟು : ವೇಂಕಟೇಶ್ವರ ಕೃತ (ವೈದ್ಯನಿಘಂಟು) ಆರು ಉಲ್ಲಾಸಗಳಿವೆ.

೪೪. ದೇಶೀನಾಮ ನಿಘಂಟು : ಹೇಮಚಂದ್ರಕೃತ (ಪ್ರಾಕೃತ ನಿಘಂಟು).

೪೫. ದ್ವಿರೂಪಕೋಶ : ಪುರುಷೋತ್ತಮದೇವ ಕೃತ (೧೧ ನೆಯ ಶತಮಾನ).

೪೬. ದ್ವಿರೂಪ ಕೋಶ : ಶ್ರೀಹರ್ಷ ಕೃತ.

೪೭. ದ್ವಿರೂಪ ಧ್ವನಿ ಸಂಗ್ರಹ : ಭರತಸೇನಕೃತ.

೪೮. ಧಾತು ರತ್ನಾಕರ : ಸಾಧುಸುಂದರಗಣಿ ಕೃತ (೧೬೩೪)

೪೯. ನಕ್ಷತ್ರ ಕೋಶ : ಜ್ಯೋತಿಶ್ಶಾಸ್ತ್ರ ನಿಘಂಟು.

೫೦. ನವಗ್ರಹಕೋಶ : ಜ್ಯೋತಿಶ್ಶಾಸ್ತ್ರ ನಿಘಂಟು.

೫೧. ನಾನಾರ್ಥ ಧ್ವನಿ ಮಂಜರಿ : ದುರ್ಗಸಿಂಹಕೃತ (೧೬ ನೆಯ ಶತಮಾನ)

೫೨. ನಾನಾರ್ಥ ಪದ ಪೇಟಿಕಾ : ಸುಜನ ಕೃತ (ನಾನಾರ್ಥ ನಿಘಂಟು).

೫೩. ನಾನಾರ್ಥ ರತ್ನ ಮಾಲಾ : ಇರುಗಪ ದಂಡನಾಯಕಕೃತ (೧೪ನೆಯ ಶತಮಾನ) ಇಮ್ಮಡಿ ಹರಿಹರನ ಆಸ್ಥಾನ ಕವಿ.

೫೪. ನಾನಾರ್ಥ ಶಬ್ದ ಕೋಶ : ಮೇದಿನೀ ಕೋಶ (ಮೇದಿನೀಕರಕೃತ).

೫೫. ನಾನಾರ್ಥ ಶಬ್ದ ರತ್ನ ಕೋಶ : ವಿಮಲ ಕೃತ (ಉಣಾದಿಕೋಶ).

೫೬. ನಾನಾರ್ಥಾರ್ಣವ ಸಂಕ್ಷೇಪ : ಕೇಶವಸ್ವಾಮಿ ಕೃತ(೧೨ನೆಯ ಶತಮಾನ) ೬ ಕಾಂಡ ೫೮೦೦ ಶ್ಲೋಕ, ಅಕಾರಾದಿ–೩೦ ಗ್ರಂಥಗಳಿಂದ ಲಕ್ಷ್ಯಶೇಖರವಾಗಿದೆ.

೫೭. ನಾಮಕೋಶ : ಸಹಜ ಕೀರ್ತಿ ಕೃತ (೧೬೩೭) ೬ ಕಾಂಡ ಲಿಂಗನಿರ್ಣಾಯಕ ಸೂತ್ರವೂ ಇದೆ.

೫೮. ನಾಮಮಾಲಾ : ಕಾತ್ಯಕೃತ–ಅಮರಸಿಂಹನಿಗಿಂತ ಪ್ರಾಚೀನ.

೫೯. ನಾಮಮಾಲಾ : ತಾರಪಾಲಕೃತ (೧೧ನೆಯ ಶತಮಾನ)

೬೦. ನಾಮಮಾಲಾ : ದುರ್ತ್ತುಕೃತ (೧೧ನೆಯ ಶತಮಾನ) ಧಾತುಗಳಿಗೂ ಶಬ್ದ ವ್ಯುತ್ಪತ್ತಿಗೂ ಪ್ರಮಾಣ ಗ್ರಂಥ.

೬೧ ನಾಮಮಾಲಾ : ಧನಂಜಯಕೃತ, ಶ್ರುತಕೀರ್ತಿ ತ್ರೈವಿದ್ಯ–(೧೨ನೆಯ ಶತಮಾನ) ದಿಗಂಬರ ಜೈನ–೨೧೦ ಶ್ಲೋಕಗಳು.

೬೨. ನಾಮಮಾಲಾ : ಭೋಜ ಕೃತ.

೬೩. ನಾಮಸಂಗ್ರಹ : ಅಪ್ಪಯ್ಯ ದೀಕ್ಷಿತ ಕೃತ (೧೫೨೫) ಸ್ವ ವ್ಯಾಖ್ಯಾನಸಹಿತ ಪರ್ಯಾಯ ಪದ ನಿಘಂಟು

೬೪. ನಿಗಮಾಭಿಧಾನ (ನಿಗಮಾಖ್ಯಾನಿದಾನ) : (ಸರ್ವಾನಂದ ಮತ್ತು ರಾಯಮುಕುಟರು ಉದಾಹರಿಸಿದ್ದಾರೆ).

೬೫ ನಿಘಂಟು : ಧರ್ಮ ಕೃತ.

೬೬. ನಿಘಂಟು ಶೇಷ : ಹೇಮಚಂದ್ರ ಕೃತ (ವೃಕ್ಷವಾಚಕ),

೬೭. ಪಂಚತತ್ತ್ವ ಪ್ರಕಾಶಿಕಾ : ವೇಣಿದತ್ತ ಕೃತ–ಷಟ್ಕೋಶ ಸಂಗ್ರಹ ಅಂತರ್ಗತ

೬೮. ಪಂಚವರ್ಗ ನಾಮ ಸಂಗ್ರಹ : ಶುಭಶೀಲಗಣಿ ಕೃತ–ಅಭಿಧಾನ ಚಿಂತಾಮಣಿಯ ಆಧಾರಿತ.

೬೯. ಪರ್ಯಾಯ ಪದ ಮಂಜರಿ : ವಿದ್ಯಾಹಂ ವೀರಮಿಶ್ರ ಕೃತ-ಕೇವಲ ಪರ್ಯಾಯಪದ ಮಾತ್ರ.

೭೦. ಪರ್ಯಾಯ ರತ್ನಮಾಲಾ : ಮಾಧವಕರ್ತೃ ಕೃತ, ಓಷಧಿ ನಿಘಂಟು–೨೧೯ ಶ್ಲೋಕಗಳು.

೭೧. ಪರ್ಯಾಯ ರತ್ನಮಾಲಾ : ಮಹೇಶ್ವರ ಕೃತ–ಎಂಟು ಪರಿಚ್ಛೇದಗಳು, ಪರ್ಯಾಯಪದ ನಿಘಂಟು.

೭೨. ಪರ್ಯಾಯ ಶಬ್ದ ರತ್ನಾಕರ : ಧನಂಜಯ ಭಟ್ಟಾಚಾರ್ಯ ಕೃತ– ೩ ತರಂಗಗಳು.

೭೩. ಪರ್ಯಾಯಾರ್ಣವ : ವೈದ್ಯನಿಘಂಟು–೫ತರಂಗಗಳು.

೭೪. ಪಾರ್ಶಿಕ ಪ್ರಕಾಶಿಕ : ವೇದಾಂಗರಾಯ ಕೃತ–ಪರ್ಷಿಯನ್ ಅರೇಬಿಕ್ ಸಂಸ್ಕೃತ–ಜ್ಯೋತಿಶ್ಶಾಸ್ತ್ರ ನಿಘಂಟು.

(29 ನೇ ಪುಟ ನೋಡಿ)

# ಉಡುಪಿಯಲ್ಲಿ ಪರ್ಯಾಯ

ಮುದ್ದಾದ ಮೂರೇಮೂರು ಅಕ್ಷರದ ಊರು ಉಡುಪಿ–ಹೆಸರೇ ಸೂಚಿಸುತ್ತದೆ ಇದರರ್ಥ– 'ಉಡು' ಎಂದರೆ ನಕ್ಷತ್ರ 'ಪ' ಎಂದರೆ ಪತಿ-ಉಡುಪತಿ, ಉಡುಪ; ನಕ್ಷತ್ರಗಳೊಡೆಯ ಚಂದ್ರ– ಚಂದ್ರ, ತನ್ನ ಅತ್ಯುಗ್ರ ತಪಸ್ಸಿನ ಫಲವಾಗಿ ಈಶ್ವರನನ್ನು ಸಾಕ್ಷಾತ್ಕರಿಸಿಕೊಂಡು ದಕ್ಷ ಬ್ರಹ್ಮನ ಶಾಪವನ್ನು ನೀಗಿಸಿಕೊಂಡು ಪೂರ್ಣಿಮೆಯ ತೇಜಃಪುಂಜರೂಪ ಪಡೆದು ಉಡುಪಿಯ ಪುರಾಣ ಚಾರಿತ್ರಿಕ ಪ್ರಸಿದ್ಧಿಗೆ ಕಾರಣ ಪುರುಷನಾದ. ಶಿವನಹಳ್ಳಿ, ಶಿವಳ್ಳಿಯಾಗಿ, ಪರಶುರಾಮನ ಕಾರಣಿಕಸ್ಥಾನವಾಗಿ ತೌಳವದೇಶ, ರಜತಪೀಠಪುರವೆಂತಲೂ ಖ್ಯಾತನಾಮ ಧರಿಸಿ, ಭಾರತದ ನಾನಾ ಮೂಲೆಗಳ ಜನರ ಬಾಯಿಂದಲೂ ಕೇಳಿ ಬರುತ್ತಿರುವ ಪತಿತಪಾವನ ಪುಣ್ಯಕ್ಷೇತ್ರ.

ಆಚಾರ್ಯಮಧ್ವರ ಜನ್ಮಲೀಲಾವೇದಿಕೆ-ಪಶ್ಚಿಮಾಂಬುಧಿಯಲ್ಲಿ ಚಲಿಸುತ್ತಿದ್ದ ಶ್ರೀಮಂತ ಹಡಗೊಂದರಲ್ಲಿ ಗೋಪೀಚಂದನ ರೂಪದಲ್ಲಡಗಿಕೊಂಡೇ ಬಿರುಸಿನ ಬಿರುಗಾಳಿ ಹುಟ್ಟಿಸಿ–ವಿರಾಗಿ ಬೈರಾಗಿ, ಅಚಲನಿಷ್ಠೆಯ ಸನ್ಯಾಸಿ, ಪೂರ್ಣಪ್ರಜ್ಞರ ಗಮನ ಸೆಳೆದು ಕೊನೆಗವರ ಕಾವಿಶಾಟಿಯ ಭಕ್ತಿ ಭಾವದ ಬೀಸಣಿಕೆಗೆ ತಲೆ ತಗ್ಗಿಸಿಯೋ ಎಂಬಂತೆ ಅವರ ಬಳಿಸಾರಿ ತಲೆಯಲ್ಲಿ ಕುಳಿತು ಕಿವಿಗಿಂಪಾದ ದ್ವಾದಶಸ್ತೋತ್ರ ಪಠನವನ್ನಾಲಿಸುತ್ತಾ ಕೊನೆಗೊಂದು ಮಕರ ಸಂಕ್ರಮಣದ ಪರ್ವದಿನ–ಮಧ್ವಕರಕಮಲ ಸಂಜಾತನಾಗಿ, ವಿಶ್ವಕರ್ಮ ವಿರಚಿತ, ರುಕ್ಮಿಣೀಕರಾರ್ಚಿತ ಸಾಲಿಗ್ರಾಮ ಶಿಲಾ ಮಧ್ಯೆ ಮುದ್ದುಮೊಗದ ಬಾಲಗೋಪಾಲ ಕೃಷ್ಣ, ಉಡುಪಿಯ ಪವಾಡ ಪುಣ್ಯಪುರುಷನಾಗಿ ಶಾಶ್ವತನೆಲೆನಿಂತು ಜೀವಕೋಟಿರಾಶಿಗಳನ್ನು ಕಾಲಪರಿಮಿತಿಯಿಲ್ಲದ ಧರ್ಮ ದರ್ಶನ ಮಾತ್ರದಿಂದ ಉದ್ಧರಿಸಿ, ಅನುಗ್ರಹಿಸುತ್ತಿರುವ ಧರ್ಮ ಜಾಗೃತಿಯ ತಾಣ.

ವಿಶಾಲ ಭರತಖಂಡದ ಭೂಪಟದಲ್ಲಿ ಇದೊಂದು ಚಿಕ್ಕದಾಗಿ ಚುಕ್ಕಿಯಂತೆ ಕಂಡು ಬಂದರೂ ದಿನದಿನಕ್ಕೆ ಅಭಿವೃದ್ಧಿ ಪಥದಲ್ಲಿ ಸಾಗುತ್ತಲಿರುವ ವಿದ್ಯಾರ್ಜನೆಯ ಪುಣ್ಯ ಧಾಮ ಎಂಬುದರಲ್ಲಿ ಸಂದೇಹವಿಲ್ಲ–ಅತ್ತ ಪಶ್ಚಿಮ ಕರಾವಳಿಯ ಸಮೃದ್ಧ ಕೈಗಾರಿಕಾ ರೇವು ಮಂಗಳೂರು, ಇತ್ತ ಸಮುದ್ರ ಕಿನಾರೆಯ ಮಳಲದಂಡೆಯ ಫಲಭರಿತ ತೆಂಗು ಕಂಗುಗಳ, ಮತ್ಸ್ಯಸಂಪತ್ತಿನ ಮಲಪು (ಮಲ್ಪೆ) ಬಂದರು; ಕತ್ತೆತ್ತಿ ನೋಡಿದರೆ ಗುಡ್ಡದೂರೆಂಬಂತೆ ಮೈನವಿರೆಬ್ಬಿಸಿ ಮನಸೂರೆಗೊಳ್ಳುವ ಬಹುಸುಂದರ ಮಣಿಪಾಲ- ಸುತ್ತುಮುತ್ತೆಲ್ಲಾ ಒಂದಲ್ಲ ಒಂದು ವಿಧದಲ್ಲಿ ಪ್ರಸಿದ್ಧಿ ಪಡೆದು ಜನ ಮನದಲ್ಲಿ ಆಸ್ತಿಕ ಭಾವನೆಗಳನ್ನು ಹುಟ್ಟಿಸುವ ಬಹುವಿಧದ ದೇವಾಲಯಗಳ ಗ್ರಾಮಗಳು.

ಸರ್ವಜನ ವಿದಿತ, ಜನಪ್ರಿಯ ಹಿರಿಯ ಧಾರ್ಮಿಕ ಕ್ಷೇತ್ರವಾಗಿ ವಿಶ್ವದ ದರ್ಶನಾಕಾಂಕ್ಷಿಗಳಿಗೆ ಪರಿಚಯ ಯೋಗ್ಯ ಯಾತ್ರಾ ಸ್ಥಳವಾಗಿರುವ ಈ ಉಡುಪಿಯಲ್ಲಿ ದುಷ್ಟ ಶಿಕ್ಷಕ, ಶಿಷ್ಟ ರಕ್ಷಕ, ವಿರಾಟ್‌ಶಕ್ತಿಯ ವಿಶ್ವ ರೂಪಿ ಶ್ರೀಕೃಷ್ಣಪರಮಾತ್ಮನನ್ನು ಮುಟ್ಟಿ ಪೂಜಿಸಲೆಂದೇ ದ್ವೈತಮತ ಸಂಸ್ಥಾಪನಾ-ಚಾರ್ಯ, ಮಧ್ವಾಚಾರ್ಯರಿಂದಲೇ ಸ್ಥಾಪಿಸಲ್ಪಟ್ಟ ಕಾಣಿಯೂರು, ಪೇಜಾವರ, ಸೋದೆ, ಶೀರೂರು, ಪುತ್ತಿಗೆ, ಕೃಷ್ಣಾಪುರ, ಅದಮೂರು, ಫಲಿಮಾರುಗಳೆಂಬ ಅಷ್ಟಮಠಗಳಿವೆ. ಈ ಅಷ್ಟಮಠದ ಯತಿಗಳು ಸರದಿ ಪ್ರಕಾರ ದ್ವಂದ್ವಮಠಕ್ಕನುಗುಣವಾಗಿ ಶ್ರೀ ಕೃಷ್ಣ ಪೂಜಾಕೈಂಕರ್ಯವನ್ನು ಪ್ರತಿ ಎರಡು ವರುಷಗಳಿಗೊಮ್ಮೆ ವಹಿಸಿಕೊಳ್ಳುತ್ತಾರೆ. ನಿತ್ಯ ತೃಪ್ತ ಭಗವಂತ, ಕೃಷ್ಣನನ್ನು ನಿತ್ಯವೂ ನಿತ್ಯ ವಿನೂತನವಾಗಿ ಬೇರೆ ಬೇರೆ ರೂಪಗಳಿಂದ ಅಲಂಕರಿಸಿ ದಿನವಹಿ ೧೬ಕ್ಕೂ ಹೆಚ್ಚಿನ ಪೂಜೆ ಸಲ್ಲಿಸುವ ಈ ಸುಯೋಗ ಎಂಟು ಮಠದ ಮಾಧ್ವಯತಿ ಪರಂಪರೆಗೆ ಸಂದು ಬಂದಿದೆ.

ಬೆಳ್ಳಿ ಚೌಕಟ್ಟಿನ ಸರ್ವಜ್ಞ ಪೀಠದಲ್ಲಿ ಅಷ್ಟ ಮಠಗಳಲ್ಲಿ ಒಂದರ ಯತಿಗಳು

**ಶ್ರೀ ಪುತ್ತೂರು ವ್ಯಾಸಕೃಷ್ಣ ತಂತ್ರಿ**

ಮಧ್ವಾಚಾರ್ಯರಿಂದ ಅನುಗ್ರಹಿಸಲ್ಪಟ್ಟ ಪಟ್ಟದ ದೇವರ ಸಮೇತ ಮುಹೂರ್ತ ನೋಡಿ ಕುಳಿತುಕೊಳ್ಳುವ ಸುದಿನವನ್ನು ಪರ್ಯಾಯ ದಿನವೆಂತಲೂ ಈ ಪರ್ಯಾಯ ದಿನ ನಡೆಯುವ ತಕ್ಕ ವಿಶೇಷ ಪೂಜೆ, ದಾನ, ಪುರಸ್ಕಾರ, ಸಾಂಸ್ಕೃತಿಕ ಕಾರ್ಯಕಲಾಪ, ಸಾಹಿತ್ಯದ ವಿದ್ವದ್ಗೋಷ್ಠಿ. ಕಲಾಮೇಳಗಳ ರಂಗುರಂಗಿನ ಮೆರವಣಿಗೆ, ದರ್ಬಾರು ಇವೆಲ್ಲವನ್ನೂ ಒಟ್ಟಿಗೆ ಪರ್ಯಾಯ ಮಹೋತ್ಸವವೆಂತಲೂ ಕರೆಯುತ್ತಾರೆ. ಪರ್ಯಾಯ ಅಂದರೆ ಇಲ್ಲಿ ಕುಳಿತುಕೊಳ್ಳುವುದು ಎಂದರ್ಥ. ಮಧ್ವಾಚಾರ್ಯರ ಸಂಕಲ್ಪ ಪ್ರಕಾರ ಅಷ್ಟಮಠಾಧೀಶರುಗಳು ವಹಿಸಿಕೊಳ್ಳುತ್ತಿದ್ದ ಶ್ರೀಕೃಷ್ಣ ಪೂಜಾದೀಕ್ಷಾ ಮಹೋತ್ಸವಕ್ಕೆ ಹೆಚ್ಚಿನ ಕಳೆ, ಮಹತ್ವವನ್ನು ತಂದುಕೊಟ್ಟವರು ಸೋದೆ ವಾದಿರಾಜ ಗುರುಸಾರ್ವಭೌಮರೆಂದು ಹೇಳುತ್ತಾರೆ. ಇವರು, ಮಧ್ವಾಚಾರ್ಯರ ಪೂರ್ವಾಶ್ರಮ ಸೋದರರಾಗಿದ್ದು ಕೊನೆಗೆ ಆಶ್ರಮ ಸ್ವೀಕರಿಸಿ ವಿಷ್ಣುತೀರ್ಥರೆಂಗು ಖ್ಯಾತನಾಮ ಧರಿಸಿ ಮೂಲ ಯತಿಗಳಾಗಿ ಉಳ್ಳ ಸೋದೆ ಮಠದ ಗುರು ಪರಂಪರೆಯಲ್ಲಿ ಜಾಜ್ವಲ್ಯಮಾನರಾದವರು. ಹಯಗ್ರೀವ ದೇವರನ್ನೊಲಿಸಿಕೊಂಡ ಪರಮ ಭಕ್ತರು–

(28ನೇ ಪುಟ ನೋಡಿ)



## ತಿರುಮಲೆ ತಿರುಪತಿ ದೇವಸ್ಥಾನಗಳು

# ದಾನಯೋಜನೆಯಲ್ಲಿ ಯಾತ್ರಿಕವಸತಿಗೃಹಗಳು

ತಿರುಮಲೆಯಲ್ಲಿ ನಿರಂತರ ಹೆಚ್ಚುತ್ತಿರುವ ಯಾತ್ರಿಕರ ಅನುಕೂಲಗಳಿಗಾಗಿ ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತವು ಹೆಚ್ಚಿನ ವಸತಿ ಸೌಕರ್ಯವನ್ನು ಒದಗಿಸಲು ತೀರ್ಮಾನಿಸಿದೆ. ಈ ಬೃಹತ್ ಕಾರ್ಯವನ್ನು ಭಕ್ತರ ಹಾಗೂ ಸೇವಾಕರ್ತರ ಸಕ್ರಿಯ ಸಹಕಾರದಿಂದ ನೆರವೇರಿಸಲು ತಿ.ತಿ.ದೇ. ನಿರ್ಧರಿಸಿದೆ.

ಈ ಯೋಜನೆಯ ವಿವರಗಳನ್ನು ಆಸಕ್ತರಿಗಾಗಿ ಈ ಕೆಳಗಿನಂತೆ ನಿರೂಪಿಸಲಾಗಿದೆ.

### ಗರುಡಾದ್ರಿನಗರ ವಸತಿಯೋಜನೆ

ಈ ಯೋಜನೆಯನ್ವಯ ಎರಡು ಅಂತಸ್ತುಗಳ 16 ವಸತಿಗೃಹಗಳನ್ನು (ಪ್ರತಿಯೊಂದು ಅಂತಸ್ತಿನಲ್ಲಿ 4 ಸೂಟ್‌ಗಳಿರುವಂತೆ) ನಿರ್ಮಿಸಲಾಗುವುದು. ಪ್ರತಿಯೊಂದು ಸೂಟ್ ಸಹ 10' x 12' ಗಳಿದ್ದು ಸ್ನಾನ ಶೌಚಾಗಾರಗಳೊಂದಿಗೆ ಹಾಗೂ ಸಾಮಾನ್ಯ ಅಂಗಳದೊಂದಿಗೆ ಕೂಡಿರುವುದು.

ಒಟ್ಟು 320 ಚದರಡಿ ಪ್ಲಿಂತ್ ವಿಸ್ತೀರ್ಣದ ಪ್ರತಿಸೂಟ್‌ಗಾಗಿ ದಾನ ನೀಡಬೇಕಾದ ಮೊಬಲಗು ರೂ 30,000 ಮಾತ್ರ.

ಒಟ್ಟು 128 ಸೂಟ್‌ಗಳಿರುವ ಈ ಯೋಜನೆಯಲ್ಲಿ ಆಸಕ್ತ ಭಕ್ತರು ಈಗಾಗಲೇ 66 ಸೂಟ್‌ಗಳಿಗಾಗಿ ದಾನಗಳನ್ನು ನೀಡಿದ್ದಾರೆ!

8 ಸೂಟ್‌ಗಳ ಒಂದು ವಸತಿಗೃಹದ ವೆಚ್ಚವಾದ 2.4 ಲಕ್ಷ ರೂಗಳನ್ನಾಗಲೀ, 4 ಸೂಟ್‌ಗಳ ವೆಚ್ಚವಾದ 1.2 ಲಕ್ಷ ರೂಗಳನ್ನಾಗಲೀ ಅಥವಾ ಎರಡು ಸೂಟ್‌ಗಳ ವೆಚ್ಚವಾದ ರೂ 60,000 ಗಳನ್ನಾಗಲೀ ನೀವು ದಾನ ನೀಡಬಹುದು.

### ರಾಮಬಗೀಚಾ ಅತಿಥಿಗೃಹ ಯೋಜನೆ

ತಿರುಮಲೆಯ ದೇವಾಲಯದ ಈಶಾನ್ಯ ಭಾಗದಲ್ಲಿನ ರಾಮ ಬಗೀಚಾದಲ್ಲಿ ಮೂರು ಅತಿಥಿ ಗೃಹಗಳನ್ನು ನಿರ್ಮಿಸಲು ತೀರ್ಮಾನಿಸಲಾಗಿದೆ.

ಪ್ರತಿಯೊಂದು ಅತಿಥಿಗೃಹವೂ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಅಂತಸ್ತಿನಲ್ಲಿ 50 ಸೂಟ್‌ಗಳಿರುತ್ತವೆ. ಪ್ರತಿಯೊಂದು ಸೂಟ್ 14' x 16' ವಿಸ್ತೀರ್ಣವಿದ್ದು ಸ್ನಾನ ಶೌಚ ಗೃಹಗಳು ಇರುತ್ತವೆ. ಪ್ಲಿಂತ್ ವಿಸ್ತೀರ್ಣ ಸುಮಾರು 600 ಚ. ಅಡಿಗಳಾಗಿದ್ದು ಸಾಮಾನ್ಯ ಅಂಗಳವಿರುವುದು. ಪ್ರತಿ ಸೂಟ್‌ನ ನಿರ್ಮಾಣಕ್ಕೆ ತಗಲುವ ದಾನದ ಮೊಬಲಗು ರೂ 60,000 ಮಾತ್ರ.

ತೀರ್ಮಾನಿಸಲಾದ 450 ಸೂಟ್‌ಗಳಲ್ಲಿ ಈಗಾಗಲೇ 37 ಸೂಟ್‌ಗಳಿಗಾಗಿ ದಾನಗಳನ್ನು ಸ್ವೀಕರಿಸಲಾಗಿದೆ!

### ನಿಮ್ಮ ದಾನದ ಪ್ರತಿಯಾಗಿ ದೊರೆಯುವ ಸೌಲಭ್ಯಗಳು ಈ ರೀತಿ ಇವೆ

1. ದಾನಿಗಳ ಹೆಸರಿನ ಫಲಕವನ್ನು ಕಟ್ಟಡದಲ್ಲಿ ಸ್ಥಾಪಿಸಲಾಗುವುದು
2. ಒಂದು ಬಾರಿಗೆ ಹತ್ತು ದಿನಗಳಿಗೆ ಮೀರದಂತೆ ದಾನಿಯು ಒಂದು ವರ್ಷದಲ್ಲಿ 60 ದಿನಗಳ ಕಾಲ ಉಚಿತವಾಗಿ ತಮ್ಮ ದಾನದ ಕಟ್ಟಡದಲ್ಲಿ ತಂಗಬಹುದು.
3. ದಾನಿಯ ಬಂಧುಗಳಿಗೆ ತಿರುಮಲೆಯಲ್ಲಿ ವಸತಿ ನೀಡುವಲ್ಲಿ ಆದ್ಯತೆ ನೀಡಲಾಗುವುದು.
4. ಅಪೇಕ್ಷಿಸಿದಾಗ ದಾನಿಯ ಕಟ್ಟಡ ಖಾಲಿಯಿಲ್ಲದಲ್ಲಿ ಇತರ ಏರ್ಪಾಡುಗಳನ್ನು ಮಾಡಿಕೊಡಲಾಗುವುದು.

ಕೂಡಲೇ ಬರೆಯಿರಿ – ಕಾರ್ಯನಿರ್ವಹಣಾಧಿಕಾರಿ
ತಿ. ತಿ. ದೇ. ತಿರುಪತಿ

# ಹರಿದಾಸರು ಕಂಡ ಉಡುಪಿಯ ಶ್ರೀಕೃಷ್ಣ

ಡಾ|| ಕೆ. ಗೋಕುಲನಾಥ್

ಭರತಖಂಡದ ಹರಿಭಕ್ತರು ನವರಾತ್ರಿಯಲ್ಲಿ ತಿರುಪತಿಯ ಬ್ರಹ್ಮೋತ್ಸವಕ್ಕೂ, ಆಷಾಢಶುದ್ಧ ಏಕಾದಶಿಯ ದಿನ ವಿಠಲನ ದರ್ಶನಕ್ಕೂ, ಉಡುಪಿಯಲ್ಲಿ ಎರಡು ವರ್ಷಕ್ಕೊಮ್ಮೆ ನಡೆಯುವ ಪರ್ಯಾಯೋತ್ಸವಕ್ಕೂ ಲಕ್ಷ ಸಂಖ್ಯೆಯಲ್ಲಿ ಸೇರಿ ಪುಣ್ಯಭಾಜನರಾಗುತ್ತಿರುವರು. ಈ ಹರಿಭಕ್ತರು ಸಾತ್ತ್ವಿಕ ಪರ್ವಗಳನ್ನಾಚರಿಸಿ ಭಾರತೀರಮಣಮುಖ್ಯಪ್ರಾಣಾಂತರ್ಗತನಾದ ಶ್ರೀಕೃಷ್ಣನಿಗೆ ಪ್ರೀತಿಯಾಗಲೆಂದು ಪ್ರಾರ್ಥಿಸುವುದು ವಾಡಿಕೆಯಾಗಿದೆ. ಏಕೆಂದರೆ ಶ್ರೀಹರಿಯ ಅನಂತರೂಪಗಳಲ್ಲಿ ಕೃಷ್ಣರೂಪವು ಭಕ್ತರ ಮನೋಭೀಷ್ಟಗಳನ್ನು ಸುಲಭವಾಗಿ ನೆರವೇರಿಸುವುದೆಂಬುದು ಭಕ್ತರ ನಂಬಿಕೆಯಾಗಿದೆ. ಕೃಷ್ಣ ಭಕ್ತರ ಬಂಧು, ಕೃಪಾಳು, ಪಾಂಡವಪ್ರಿಯ, ಪಾರ್ಥನ ಭಕ್ತಿಗೊಲಿದು ಅವನ ಸಾರಥಿಯಾಗಿ ಅವನನ್ನು ರಕ್ಷಿಸಿದವನು. ಪಾಂಡವರು ನೆನೆದಾಗ ದರ್ಶನಕೊಟ್ಟು ಕಷ್ಟಗಳನ್ನು ಪರಿಹರಿಸಿದವನು. ಕೃಷ್ಣಾವತಾರದಲ್ಲಿ ರಾಜರ ಹಾಗೂ ಸಾಮಾನ್ಯರೊಡನೆ ಬೆರೆತು ಭಜಿಸಿದವರ ಮನೋಭೀಷ್ಟಗಳನ್ನು ಈಡೇರಿಸಿದವನೆಂದು ಶ್ರೀಮನ್ಮಹಾಭಾರತ ಹಾಗೂ ಭಾಗವತ ಗ್ರಂಥಗಳಿಂದ ತಿಳಿದುಬರುತ್ತದೆ. ಕೃಷ್ಣಕೃಪೆಗಳಿಸುವುದು ಸುಲಭವೆಂದು ತಿಳಿದ ಕನ್ನಡ ಕವಿಗಳನೇಕರು ತಮ್ಮ ಕಾವ್ಯಗಳನ್ನು ಕೃಷ್ಣಚರಿತೆಗಳೆಂದು ಹೆಮ್ಮೆಯಿಂದ ಹೇಳಿರುವರು. ಕನ್ನಡದ ವರಕವಿ ಕುಮಾರವ್ಯಾಸ ತನ್ನ ಕರ್ಣಾಟ ಭಾರತ ಕಥಾಮಂಜರಿಯನ್ನು 'ಕೃಷ್ಣಚರಿತೆ' ಎಂದಿರುವನಾದರೆ, ರುದ್ರಭಟ್ಟ ಬರೆದಿರುವ 'ಜಗನ್ನಾಥ ವಿಜಯ' ಎಂಬ ಚಂಪೂಕಾವ್ಯದ ಮೊದಲ ಪದ್ಯದಲ್ಲಿ "ಕೃಷ್ಣನೆಮಗೀಗಾನಂದಸಂದೋಹಮಂ" ಎಂದು ಹೇಳುವುದರ ಮೂಲಕ ಜಗನ್ನಾಥನೆಂದರೆ ಕೃಷ್ಣ ಎಂದೇ ಪ್ರತಿಪಾದಿಸಿದ್ದಾನೆ. ನಾದಲೋಲ ಲಕ್ಷ್ಮೀಶ ತನ್ನ ಜೈಮಿನಿ ಭಾರತವನ್ನು "ಪುಣ್ಯಮಿದು ಕೃಷ್ಣ ಚರಿತಾಮೃತಂ" ಎಂದಿದ್ದಾನೆ. ಭರತ ಖಂಡದಲ್ಲಿರುವ ದೇವಾಲಯಗಳ ಸಮೀಕ್ಷೆಯೊಂದನ್ನು ನಡೆಸಿದರೆ ಸಂಖ್ಯೆಯಲ್ಲಿ ಇತರ ದೇವಾಲಯಗಳನ್ನು ಕೃಷ್ಣದೇವಾಲಯ ಮೀರಿಸುವುದೆನಿಸುತ್ತದೆ. ಉತ್ತರಭಾರತದ ಮಥುರಾ ನಗರದ ಸುತ್ತಮುತ್ತ ಹತ್ತು ಸಹಸ್ರ ಕೃಷ್ಣ ದೇವಾಲಯಗಳಿವೆ ಎಂದು ಕೇಳಿದ್ದೇನೆ! ಉತ್ತರ ಭಾರತದಲ್ಲಿ ಚೈತನ್ಯ ಪಂಥೀಯರಲ್ಲಿ ಕೃಷ್ಣಭಕ್ತಿ, ಕೃಷ್ಣಭಜನೆ, ಕೃಷ್ಣಜಪ, ಕೃಷ್ಣದೇವಾಲಯ ಸಂದರ್ಶನಗಳು ಒಂದು ಅನನ್ಯಕ್ರಿಯೆಯಾಗಿ ಇಂದಿಗೂ ಮುಂದುವರಿಯುತ್ತಿದೆ. ಕರ್ನಾಟಕದ ಉಡುಪಿಯಲ್ಲಿ ಕೃಷ್ಣವಿಗ್ರಹವನ್ನು ಪ್ರತಿಷ್ಠಾಪಿಸಿ ದ್ವೈತಸಿದ್ಧಾಂತವನ್ನು ಪ್ರತಿಪಾದಿಸಿದ ಶ್ರೀ ಮಧ್ವಾಚಾರ್ಯರ ಪ್ರಭಾವದಿಂದಲೇ ಚೈತನ್ಯ ಪಂಥ ಕೃಷ್ಣಭಕ್ತಿಯನ್ನು ಬೆಳೆಸಿಕೊಂಡಿದೆ ಎಂಬುದು ಐತಿಹಾಸಿಕ ಸತ್ಯಸಂಗತಿಯಾಗಿದೆ.

ಹೀಗೆ ಭಾರತಾದ್ಯಂತ ವ್ಯಾಪಿಸಿಕೊಂಡಿರುವ ಕೃಷ್ಣಭಕ್ತಿಯು ಕರ್ನಾಟಕದ ಹರಿದಾಸರ ಕೃತಿಗಳಲ್ಲಿ ಬಗೆ ಬಗೆಯ ಭಕ್ತಿಭಾವವಾಗಿ ಅರಳಿದೆ ಎಂಬುದನ್ನು ಸಮೀಕ್ಷಿಸಬಹುದು. ಶ್ರೀಕೃಷ್ಣನನ್ನು ಕುರಿತು ಹರಿದಾಸರು ರಚಿಸಿರುವ ಸುಮಾರು ಐದು ನೂರು ಕೃತಿಗಳು ದೊರೆಯುತ್ತವೆ. ಆದರೆ ಉಡುಪಿಯ ಶ್ರೀಕೃಷ್ಣನನ್ನು ಕುರಿತು ಕೇವಲ ಎಂಭತ್ತು ರಚನೆಗಳು ದೊರೆತಿವೆ. ಅವುಗಳಲ್ಲಿ ಉಡುಪಿಯ ಶ್ರೀಕೃಷ್ಣನನ್ನು ಕುರಿತ ಪೌರಾಣಿಕ ಕಥೆಗಳು, ಮಧ್ವಾಚಾರ್ಯರಿಗೆ ಕೃಷ್ಣ ವಿಗ್ರಹ ದೊರಕಿದ ಪ್ರಸಂಗ, ಮಧ್ವ ಸರೋವರದ ಕೃಷ್ಣಾರ್ಚನೆಯ ಕ್ರಮ, ನೈವೇದ್ಯವಿವರ, ಕೃಷ್ಣ ಪ್ರಸಾದ ಸ್ವೀಕಾರದಿಂದ ದೊರೆಯುವ ಪುಣ್ಯ, ವಿಶೇಷದಿನಗಳಲ್ಲಿ ಕೃಷ್ಣನಿಗೆ ಅಲಂಕರಿಸುವ ರೀತಿ, ಶ್ರೀಮದ್ಭಾಗವತ ಹಾಗೂ ಶ್ರೀಮನ್ಮಹಾಭಾರತಗಳಲ್ಲಿ ಉಕ್ತವಾಗಿರುವ ಅನೇಕ ಕಥಾಪ್ರಸಂಗಗಳ ವಿವರಣೆಗಳು ಅಡಕವಾಗಿವೆ.

ಉಡುಪಿಯ ಶ್ರೀಕೃಷ್ಣನನ್ನು ಹಲವು ಬಾರಿ ಎರಡೆರಡು ವರ್ಷಗಳವರೆಗೆ ಪೂಜಿಸುವ ಸುಯೋಗವನ್ನು ಪಡೆದ ಭಾವೀಸಮೀರರೆಂದು ಪ್ರಖ್ಯಾತರಾಗಿರುವ ವಾದಿರಾಜ ಗುರುಸಾರ್ವಭೌಮರು ರಚಿಸಿರುವ ಮೂವತ್ತೆರಡು ಕೀರ್ತನೆಗಳು ದೊರೆತಿದ್ದು, ಇದು ಇತರ ಹರಿದಾಸರ ರಚನೆಗಳ ಸಂಖ್ಯೆಯನ್ನು ಮೀರಿಸಿರುವುದು. ಇದು ಉಡುಪಿಯ ಶ್ರೀಕೃಷ್ಣನಲ್ಲಿ ವಾದಿರಾಜರಿಗಿದ್ದ ಅತಿಶಯ ಭಕ್ತಿಯ ದ್ಯೋತಕವಾಗಿದೆ. ಈ ಕೃತಿಗಳಲ್ಲಿ ವಾದಿರಾಜರ ಮಧುರ ಭಕ್ತಿ ಭಾವ ಪ್ರದರ್ಶನವಾಗಿದೆ.

ಕೋಗಿಲೆಯೊಂದನ್ನು ಸಂಬೋಧಿಸಿ 'ಶ್ರೀಪತಿಯ ಕಂಡರೆ ಬರಹೇಳು' ಎಂದು ಅಂಗಲಾಚುವ ಪರಿ ಒಂದೆಡೆ ಕಾಣುವುದಾದರೆ 'ನೀರೆ ತೋರೆಲೆ ನೀಲವರ್ಣದ ದೇವನ' ಎಂದು ಗೋಪಿಕಾ ಸ್ತ್ರೀಯರು ಶ್ರೀಕೃಷ್ಣನ ದರ್ಶನಕ್ಕಾಗಿ ಗೋಕುಲದಲ್ಲಿ ಹೇಗೆ ಪರಿತಪಿಸುತ್ತಿದ್ದರೆಂಬ ಚಿತ್ರವನ್ನು ನೀಡಿದ್ದಾರೆ. 'ಏನು ಸುಕೃತವ ಮಾಡಿದಳೊ ಯಶೋದೆ' ಎಂಬ ಕೀರ್ತನೆಯಲ್ಲಿ ಯಶೋದೆಯ ಪುಣ್ಯವನ್ನೂ 'ನೆನೆವೆನನುದಿನ ನೀಲನೀರದ ವರ್ಣನ' ಎಂಬ ಒಂಭತ್ತು ನುಡಿಗಳ ಕೀರ್ತನೆಯಲ್ಲಿ ಕೃಷ್ಣನ ಬಾಲ್ಯಲೀಲೆಗಳನ್ನೂ, ದುಷ್ಟಜನರ ಸಂಹಾರದ ಕಥೆಗಳನ್ನೂ, 'ನ'ಕಾರದ ಪ್ರಾಸಾನುಪ್ರಾಸದಲ್ಲಿ ಮೇಳವಿಸಿರುವುದು ಕರ್ಣಾನಂದಕರವಾಗಿದೆ. 'ಇಂದ್ರಲೋಕವ ಪೋಲ್ವ ದ್ವಾರಕಿಯಿಂದ ನಮ್ಮನು ಸಲಹಗೋಸುಗ' ಎಂದು ಆರಂಭವಾಗುವ ಭಾಮಿನಿ ಷಟ್ಪದಿಯ ಹಾಡಿನಲ್ಲಿ ಉಡುಪಿಯ ಕೃಷ್ಣನ ಪೂಜಾವೈಖರಿಯನ್ನು ಪರಿಚಯ ಮಾಡಿಕೊಟ್ಟಿದ್ದಾರೆ. ಜಾನಪದ ಧಾಟಿಯಲ್ಲಿ ರಚಿಸಿರುವ ಸುವ್ವಿ ಪದ "ಜಯ ಮಧ್ವವಲ್ಲಭ ಜಯಶುದ್ಧ ಸುಲಭ' ಎಂಬ ಕೃತಿಯನ್ನು ಒಮ್ಮೆ ಓದಿದರೆ ಸಾಕು, ಅದರ ಶಬ್ದ ಲಾಲಿತ್ಯದ ಕಾರಣದಿಂದ ಬಹುಬೇಗ ನೆನಪಿನಲ್ಲಿ ಭದ್ರವಾಗಿ ಉಳಿಯುತ್ತದೆ. ಈ ಕೀರ್ತನೆಯಲ್ಲಿ



ಉಡುಪಿಯ ಅಷ್ಟಮಠಗಳ ಮೂಲಪುರುಷರಾದ ನರಹರಿತೀರ್ಥ, ಹೃಷೀಕೇಶತೀರ್ಥ, ಉಪೇಂದ್ರತೀರ್ಥ, ವಾಮನತೀರ್ಥ, ವಿಷ್ಣುತೀರ್ಥ, ರಾಮತೀರ್ಥ, ಅಧೋಕ್ಷಜತೀರ್ಥ ಮತ್ತು ಪದ್ಮನಾಭತೀರ್ಥರನ್ನೂ ವಂದಿಸಿರುವರು. 'ಬಣ್ಣಿಸಲಳವೆ ನಾನು' ಎಂಬ ಕೀರ್ತನೆಯಲ್ಲಿ ವಾದಿರಾಜರು ವಾರದ ಏಳು ದಿನಗಳಲ್ಲಿ ಕೃಷ್ಣನಿಗೆ ಹಾಕಲಾಗುವ ಸೂರ್ಯಾಲಂಕಾರ, ಗೋಪಾಲ ಅಲಂಕಾರ, ಕಿರಾತಾಲಂಕಾರ, ವಿಪ್ರಾಲಂಕಾರ, ಮೋಹಿನಿ ಅಲಂಕಾರ ಹಾಗೂ ವೆಂಕಟರಮಣಾಲಂಕಾರದ ವಿಷಯವನ್ನು ದಾಖಲಿಸಿದ್ದಾರೆ. (ಇಲ್ಲಿ ಆರು ಅಲಂಕಾರಗಳ ಉಲ್ಲೇಖವಿದೆ; ವಿಪ್ರಾಲಂಕಾರವನ್ನು ಬುಧವಾರ ಮತ್ತು ಗುರುವಾರ ಹಾಕುವರೆಂದು ಕೇಳಿದ್ದೇವೆ.) 'ಉತ್ಸವದ ಲಾಘ್ನಿಕವ ಕಂಡು ಜನರು ಕೇಳಿರಯ್ಯ' ಎಂಬ ಕೃತಿಯಲ್ಲಿ ಉಡುಪಿಯ ಶ್ರೀಕೃಷ್ಣನಿಗೆ ಬೆಳಗಿನ ಝಾವದಿಂದ ರಾತ್ರಿಯವರೆಗೆ ನಡೆಸುವ ವಿವಿಧ ಪೂಜಾವಿವರಗಳಿವೆ. ಒಮ್ಮೆ ಉಡುಪಿಯಲ್ಲಿ ಈ ಪೂಜೆಗಳನ್ನು ನೋಡಿದವರು ಈ ಕೀರ್ತನೆಯನ್ನೋದಿದರೆ ಆ ಪೂಜಾ ಚಿತ್ರ ಮನಸ್ಸಿನಲ್ಲಿ ಸುಳಿದು ಆನಂದವಾಗುತ್ತದೆ. ಮಧ್ವಸರೋವರದಿಂದ ಶೋಧಿಸಿದ ತಿಳಿನೀರನ್ನು ಚಿನ್ನದ ಕಲಶದಲ್ಲಿ ತರುವಾಗ ಮಾಡುವ ಘಂಟಾನಾದದ ವಿವರಣೆಯನ್ನೂ ಈ ಕೀರ್ತನೆಯಲ್ಲಿ ವಾದಿರಾಜರು ಮರೆಯದೆ ಕೊಟ್ಟಿರುವರು.

ಉಡುಪಿಯಲ್ಲಿ ಶ್ರೀಕೃಷ್ಣನನ್ನು ಮಧ್ವಸರೋವರಾಭಿಮುಖವಾಗಿ ಮಧ್ವಾಚಾರ್ಯರು ಪ್ರತಿಷ್ಠಾಪಿಸಿದರೆಂದೂ, ಅನಂತರ ಕನಕದಾಸರ ಕಾಲದಲ್ಲಿ ಶ್ರೀಕೃಷ್ಣ ಅವರ ಭಕ್ತಿಗೊಲಿದು ಹಿಂದು ಮುಂದಾಗಿ ತಿರುಗಿದನೆಂದೂ, ಗೋಡೆಯಲ್ಲಿ ರಂಧ್ರಗಳಾಗಿ ಕನಕದಾಸರಿಗೆ ಕೃಷ್ಣದರ್ಶನ ಲಭ್ಯವಾಯಿತೆಂದೂ ಒಂದು ಕಥೆಯುಂಟು. ಆದರೆ ಈ ಪವಾಡದ ಕಥೆಯನ್ನು ಯಾವ ಹರಿದಾಸರೂ [ಕನಕದಾಸರೂ ಸೇರಿದಂತೆ] ತಮ್ಮ ಕೃತಿಗಳಲ್ಲಿ ಉಲ್ಲೇಖಿಸಿರುವುದಿಲ್ಲ. ಇಂದು ಕೃಷ್ಣನ ವಿಗ್ರಹ ಮಧ್ವಸರೋವರಾಭಿಮುಖವಾಗಿರುವುದಿಲ್ಲ. ಮಧ್ವಸರೋವರದ ಕಡೆಗಿರುವ ಬಾಗಿಲೊಳಗೆ ಪ್ರವೇಶಿಸಿ ಅರ್ಧಪ್ರದಕ್ಷಿಣೆ ಮಾಡಿದ ತರುವಾಯ ಒಂಭತ್ತು ಕಿಂಡಿಗಳ ಮೂಲಕ ಶ್ರೀಕೃಷ್ಣನ ದರ್ಶನವನ್ನು ಮಾಡಬೇಕು. ಈ ಕಿಂಡಿಗಳ ಮೂಲಕ ಭಗವಂತನನ್ನು ದರ್ಶಿಸುವ ಪದ್ಧತಿ ವಾದಿರಾಜರ ಕಾಲದಲ್ಲಿದ್ದಿತೆಂದು 'ನೋಡಿದೆ ಶ್ರೀಕೃಷ್ಣನ ನೋಡಿದೆ। ನೋಡಿದೆ ಒಂಭತ್ತು ಗೂಡಿನ ಕಿಡಿಕಿಯೊಳ್ಕೂಡಿದ ಮಂದಿಯೊಳ್ಗಾಡಿಕಾರನನಿಂದು' ಎಂಬ ಕೀರ್ತನೆಯಲ್ಲಿರುವ ವಾಕ್ಯಗಳಿಂದ ತಿಳಿದು ಬರುತ್ತದೆ. ವಾದಿರಾಜರು ಈ ಪವಾಡದ ಕಥೆಯನ್ನು ಹೇಳಿಲ್ಲ.

ವಿಜಯದಾಸರು ಉಡುಪಿಯ ಕೃಷ್ಣನನ್ನು ಕುರಿತು ರಚಿಸಿರುವ ಇಪ್ಪತ್ತನಾಲ್ಕು ಕೀರ್ತನೆ ಸುಳಾದಿಗಳು ದೊರೆತಿವೆ. ಮಧ್ವಾಚಾರ್ಯರಿಗೆ ಗೋಪೀಚಂದನದ ಗಡ್ಡೆಯಲ್ಲಿ ಶ್ರೀಕೃಷ್ಣನ ವಿಗ್ರಹ ದೊರಕಿತೆಂದು 'ಹಡಗಿನಲ್ಲಿದ್ದ ಅಣುಮೂರುತಿ ಪರಮಾಣು ಮೂರುತಿ' ಎಂಬ ಸುಳಾದಿಯಲ್ಲಿ ಸ್ಪಷ್ಟವಾಗಿ ತಿಳಿಸಿ. ಈ ವಿಗ್ರಹದ ಪೌರಾಣಿಕ ಪ್ರಸಂಗವನ್ನು ವಿವರಿಸಿ, 'ಮಧ್ವಸರೋವರಸ್ನಾನ ಮುದ್ದುಕೃಷ್ಣನ ಧ್ಯಾನ ಶುದ್ಧನಾಗಿ ಮಾಡಿ ವಿಜಯ ವಿಟ್ಠಲಕಾವ' ಎಂದಿದ್ದಾರೆ. ಉಡುಪಿಯ ಮಠದಲ್ಲಿ 'ಒಡಲ ತುಂಬ ಮೆದ್ದವಗೆ ವರಗಳ ಏನು ಕೊಡಲಿ (ಕೃಷ್ಣ) ಎಂದು ತನ್ನ ಸತಿಯ ಕೂಡಾಡುವ' ಎಂಬ ವಾಕ್ಯದಲ್ಲಿ 'ಅನ್ನಬ್ರಹ್ಮ'ನ ವೈಶಿಷ್ಟ್ಯದ ವಿವರವಿದೆ. ಬೆಳಗಿನಿಂದ ರಾತ್ರಿಯವರೆಗೆ ನಡೆಯುವ ನೈವೇದ್ಯ ಸಮರ್ಪಣಾವೈಖರಿಯನ್ನು ಗಮನಿಸಿದ ವಿಜಯದಾಸರು 'ಕದ್ದು ತಿಂದವಗೆ ಬಲು ಉಪಚಾರ' ಏಕೆಂದು ವಿಸ್ಮಯಪಟ್ಟಿದ್ದಾರೆ. 'ನೋಡಿದ್ಯಾ ರಂಗನ ನೋಡಿದ್ಯಾ' ಎಂಬ ಕೃತಿಯಲ್ಲಿ ಕೃಷ್ಣನಿಗೆ ಹಾಕಿದ ಸ್ತ್ರೀ ಅಲಂಕಾರವನ್ನು ವರ್ಣಿಸಿ, 'ಕೃಷ್ಣರಾಯನ ದರುಶನಕೆ ಮನ ಮಾಡಿದ ಶಿಷ್ಯಾಚಾರಿಗೆ ಲಿಂಗಕಾಯ ಭಂಗಾ' ಎಂದು ಈ ಯಾತ್ರೆಯ ಫಲವನ್ನು ಹೇಳಿದ್ದಾರೆ.

'ಮಧ್ವಸರೋವರದಿ ಮೀಯದ ಜನುಮೇನು? ಮುದ್ದು ಕೃಷ್ಣನ್ನ ನೋಡದ ಅಕ್ಷಿಯೇನು?' ಎಂದು ಗಂಡು ನುಡಿಯಿಂದ ಪ್ರಶ್ನಿಸುವ ಪ್ರಸನ್ನ ವೆಂಕಟದಾಸರು 'ಕಡಲಶಯನನೊಳು ದೃಢಭಕ್ತಿ ಇರದೆ' ಯಾವುದೇ ವಿಧವಾದ ದೇಹದಂಡನೆಯಿಂದಲೂ ಫಲದೊರೆಯದೆಂದಿದ್ದಾರೆ.

ಪುರಂದರದಾಸರು, ಗೋಪಾಲದಾಸರು ಮತ್ತು ಜಗನ್ನಾಥದಾಸರು ಉಡುಪಿ ಕೃಷ್ಣನನ್ನು ಕುರಿತು ಕೆಲವು ಸ್ತೋತ್ರಗಳನ್ನು ರಚಿಸಿರುವರಾದರೂ ಅವುಗಳಲ್ಲಿ ಭಗವಂತನ ಸ್ತೋತ್ರ, ಸ್ಮರಣೆಗಳಿವೆ. ಉಡುಪಿಯ ಕೃಷ್ಣನ ವೈಶಿಷ್ಟ್ಯಗಳನ್ನು ಕುರಿತು ವಿವರಣೆಗಳು ಕಂಡುಬರುವುದಿಲ್ಲ.

'ಭಕ್ತರು ದುಃಖಿಸುತ್ತಿದ್ದಾರೆ; ನೀನು ಮಾತ್ರ ಸಡಗರದಿಂದ ಒಂದರ ನಂತರ ಮತ್ತೊಂದು ನೈವೇದ್ಯವನ್ನು ಸ್ವೀಕರಿಸುತ್ತಾ ಭಕ್ತರ ಕಡೆ ದೃಷ್ಟಿ ಹರಿಸದೆ ನಿರ್ಲಿಪ್ತನಾಗಿರುವೆ, ಭವಮಡುವಿನೊಳಗೆ ನೂಕಿ ಮಿಡುಕಿಸಿ ನೋಡುವುದು ತರವೆ' ಎಂದು ಮುದ್ದುಮೋಹನ ವಿಠಲದಾಸರು ಒಂದು ಉಗಾಭೋಗದಲ್ಲಿ ಪ್ರಶ್ನಿಸುತ್ತಾ, ಐಹಿಕ ಸುಖಾಪೇಕ್ಷೆಯಾಗಿ ಬಂದವರು ತಾವಲ್ಲ; ದೃಢವಾದ ಜ್ಞಾನ, ಭಕ್ತಿ ವೈರಾಗ್ಯಗಳನ್ನು ದಯಪಾಲಿಸಬೇಕೆಂದು ಪ್ರಾರ್ಥಿಸಿದ್ದಾರೆ. ರಾಮಚಂದ್ರವಿಠಲರ್ನ ಸುಳಾದಿಯೊಂದರಲ್ಲಿ ಭಕ್ತರೆಲ್ಲರೂ ಭಗವಂತನನು ಪೂಜಿಸಿ ನಾನಾವಿಧವಾದ ಬೇಡಿಕೆಗಳನ್ನು ಮಂಡಿಸುವರೆಂದು ಲೆಕ್ಕಹಾಕಿದ ಉಡುಪಿಯ ಕೃಷ್ಣ ತನ್ನ ಪೂಜೆಗೆ ವೈರಾಗ್ಯನಿಧಿಗಳಾದ ಯತಿವರೇಣ್ಯರು ಮಾತ್ರ ಪೂಜಿಸುವಂತಹ ಪದ್ಧತಿಯನ್ನು ಜಾರಿಗೆ ತಂದಿರಬೇಕೆಂದು ತರ್ಕಿಸಿರುವರು. ವರಕೇಶವಾಂಕಿತದಾಸರು ಉಡುಪಿಯ ಶ್ರೀಕೃಷ್ಣನನ್ನು 'ಬಡವರ ಭಾಗ್ಯನಿಧಿ, ಭಾಗವತರ ಭಾಗ್ಯ, ಆನಂದದ ಮಡು' ಎಂದು ವರ್ಣಿಸಿ ಗೋಪಾಲಕರನ್ನೂ, ಗೋಪಿಯರನ್ನು ವಂಚಿಸಿ ಗೋವುಗಳಿಂದ ದೂರವಾಗಲು ಬೃಂದಾವನದಿಂದ ದೂರದ ಕಡಲತೀರದ ಉಡುಪಿಗೆ ಕೃಷ್ಣ ಬಂದಿರಬೇಕೆಂದು ಹೇಳಿ 'ಬಿಡೆ ನಿನ್ನ ದಾಸ್ಯದ ಪರಮ ಪದವಿಯನು' ಎಂದು ಪ್ರತಿಜ್ಞೆ ಮಾಡಿದ್ದಾರೆ. ಗುರುಗೋವಿಂದ ವಿಠಲದಾಸರು 'ಕ್ಷೇತ್ರವೆಂದರೆ ಉಡುಪಿ ಕ್ಷೇತ್ರ' ಎಂದು ಬಣ್ಣಿಸಿ, 'ಕಾಸು ವೀಸಕೆ ವರದನಲ್ಲವೋ ಭಕುತಿ ಪಾಶಗಳಿಗೆ ಒಲಿವ ಶ್ರೀಕೃಷ್ಣ' ಎಂದು ತಿಳಿಸಿ, ಭಗವಂತ ಭಕ್ತಿಪ್ರಿಯನೆಂಬುದನ್ನು ಮನದಟ್ಟು ಮಾಡಲು ಪ್ರಯತ್ನಿಸಿರುವರು.

ವ್ಯಾಸರಾಜರು ಉಡುಪಿಯ ಶ್ರೀಕೃಷ್ಣನನ್ನು ಕುರಿತು ರಚಿಸಿರುವ ಏಳು ಕೃತಿಗಳು ದೊರೆತಿವೆ. ಇದರಲ್ಲಿ ಐದು ಕೀರ್ತನೆಗಳಲ್ಲಿ ಶ್ರೀಕೃಷ್ಣನ ಬಾಲ್ಯಲೀಲೆಗೆ ಸಂಬಂಧಿಸಿದ ಭಾಗವತದ ಕಥೆಗಳ ವಿವರವಿದೆ. 'ರಂಗ ಬಂದ ಬೃಂದಾವನದಲಿ ನಿಂದ', 'ಕಡೆಗೋಲು ತಾರೆನ್ನ ಚಿನ್ನವೇ', 'ಬಾರೊ ಬೇಗ ನೀರಜಾಕ್ಷ' ಎಂಬ ಕೀರ್ತನೆಗಳಲ್ಲಿ ವ್ಯಾಸರಾಜರು ಶ್ರೀಕೃಷ್ಣನನ್ನು ಸಲಿಗೆಯಿಂದ ಮಾತನಾಡಿಸಿರುವರು. ಉಡುಪಿ ಕ್ಷೇತ್ರದೊಡನೆ ವ್ಯಾಸರಾಜರು ಹೊಂದಿದ್ದ ನಿಕಟ ಸಂಪರ್ಕದ ಸ್ವರೂಪವನ್ನು ಈ ಕೃತಿಗಳು ಸೂಚಿಸುತ್ತವೆ.

ಹರಿದಾಸರ ಯಾತ್ರೆಗಳಲ್ಲಿ ಉಡುಪಿಗೆ ಒಂದು ಪ್ರಧಾನ ಸ್ಥಾನವಿತ್ತೆಂದು ಈ ಕೃತಿಗಳ ಅವಲೋಕನದಿಂದ ನಮಗೆ ಸ್ಪಷ್ಟವಾಗುತ್ತದೆ. 'ಉಡುಪಿ'ಯ ಹೆಸರನ್ನು ಸೂಚಿಸದಿರುವ ಕೀರ್ತನೆಗಳು ಉಡುಪಿಯ ಕೃಷ್ಣನನ್ನು ನೋಡಿದಾಗ ರಚಿಸಿರಬಹುದಾದ ಸಂದರ್ಭಗಳು ಇಲ್ಲದಿರುವುದಿಲ್ಲ. ಆದರೆ ಅಂತಹವುಗಳಾವುವೆಂಬುದನ್ನು ನಿಸ್ಸಂಶಯವಾಗಿ ಗುರುತಿಸಲು ಸಾಧ್ಯವಾಗುವುದಿಲ್ಲ. ತಿರುಪತಿಯ ತಿಮ್ಮಪ್ಪ, ಪಂಢರಾಪುರದ ವಿಠಲ ಹಾಗೂ ಉಡುಪಿಯ ಶ್ರೀಕೃಷ್ಣನೆಂದರೆ ಹರಿದಾಸರಿಗೆ ಭಕ್ತಿ ಉಕ್ಕಿ ಹರಿ[illegible] ಹೇಳಬಹುದು.

## ಪುರಂದರ ಸಾಹಿತ್ಯ

ಪುರಂದರದಾಸರು ಜನಪದ ಕವಿಗಳು ಮಾನವ ಜನಾಂಗದ ಕವಿಗಳು. ಅವರು ತಮ್ಮ ಬಾಳಿನುದ್ದಕ್ಕೂ ಅನುಭವಿಸಿದ್ದನ್ನು, ಪ್ರಮಾಣಿಕವಾಗಿ ಹಾಡಿದ್ದಾರೆ. ಜನಪದ ಭಾಷೆಯ ಸುಗಂಧವನ್ನು ಅಲ್ಲಿ ತುಂಬಿದ್ದಾರೆ. ಮತ್ತೆ ಆ ಹಾಡುಗಳಲ್ಲಿ ಇಂದಿಗೂ, ಎಂದೆಂದಿಗೂ ಅನುಷ್ಠಾನಕ್ಕೆ ತಂದುಕೊಳ್ಳಲು, ಮಾನವಕೋಟಿಗಾಗಿ, ಮಾನವತೆಯ ಮಂದಾರದ ಮಕರಂದವನ್ನು ಸೆರೆಹಿಡಿದಿಟ್ಟಿದ್ದಾರೆ. ಅವರು ಎಂದಿಗೂ ಕವಿಯಾಗಬೇಕೆಂದು ಹಾಡು ಹೇಳಿದವರಲ್ಲ. ಅವರು ಐಶ್ವರ್ಯದ ತುತ್ತತುದಿಯನ್ನು ಮುಟ್ಟಿ ಆ ಸೊಗಸಿನ ಇತಿಮಿತಿಗಳನ್ನು ಅರಿತು, ಹೊಸ್ತಿಲಿಗೆ ತುಳಸೀಪತ್ರವನ್ನಿಟ್ಟು, ಕೃಷ್ಣಾರ್ಪಣ ಹೇಳಿ ದಾಸರಾಗಿ ಪದ ಹಾಡಿದವರು. ಹೀಗೆ ಅವರು ಹಾಡಿದ್ದೆಲ್ಲ ಜೀವನ ವೇದಾಂತ, ಜೀವನ ಕಾವ್ಯ.

ಪುರಂದರದಾಸರು ಉಗಾಭೋಗ, ಸುಳಾದಿ ಕೀರ್ತನೆ, ಪದ ಇತ್ಯಾದಿ ರೂಪಗಳಲ್ಲಿ ತಮ್ಮ ಸಾಹಿತ್ಯವನ್ನು ರಚನೆ ಮಾಡಿದ್ದಾರೆ. ಹೀಗಿರುವ ಅವರ ಒಟ್ಟು ರಚನೆಗಳನ್ನೆಲ್ಲ ಸಾಮಾನ್ಯವಾಗಿ ಪುರಂದರದಾಸರ ಪದಗಳೆಂದೇ ಕರೆಯುವುದು ವಾಡಿಕೆ. ಈ ತರಹದ ಅವರ ಒಂದೊಂದೂ ಪದ ಉಪನಿಷತ್ತಿನ ಮಾತುಗಳ ಮೌಲ್ಯವನ್ನು ಪಡೆದಿವೆ. ಅಂತೆಯೇ ಈ ದಾಸರ ಪದಗಳಿಗೆಲ್ಲ ಪುರಂದರೋಪನಿಷತ್ ಎಂಬ ಹೆಸರು ಬಂದಿರುವುದು. ಇದನ್ನೆಲ್ಲ ಅರಿತೇ ಪುರಂದರದಾಸರ ಗುರುಗಳಾದ ವ್ಯಾಸತೀರ್ಥರು "ದಾಸರೆಂದರೆ ಪುರಂದರದಾಸರಯ್ಯ" ಎಂದು ಮನತುಂಬಿ ಹಾಡಿ ಹರಸಿದರು. ಅವರ ಮಹಿಮೆಗಳನ್ನು ಕೊಂಡಾಡಿದರು. ದಾಸ ಮಾರ್ಗಕ್ಕೆ ದಾಸತ್ವಕ್ಕೆ ಇರುವ ನಿಜವಾದ ಅರ್ಥವನ್ನು ಬೆಳಕಿಗೆ ತಂದರು.

ದಾಸ ಸಾಹಿತ್ಯವು ಕನ್ನಡ ಸಾಹಿತ್ಯದಲ್ಲಿಯೇ ಅಪೂರ್ವ ಭಾಗ. ಅಂತಃಸತ್ತ್ವದಿಂದ ಕೂಡಿದ ಸಾಹಿತ್ಯ. ಸಂಗೀತದ ಸಾಂಗತ್ಯದಲ್ಲಿ ಬದುಕನ್ನೇ ಅರಳಿಸುವ ಶಕ್ತಿಯನ್ನು ಪಡೆದಿರುವ ಭಾಗ. ಈ ಭಾಗಕ್ಕೆ ಧ್ರುವತಾರೆ ಪುರಂದರದಾಸರು. ಭಾಷೆಯ ದೃಷ್ಟಿಯಿಂದ, ಭಾವನೆಯ ದೃಷ್ಟಿಯಿಂದ ಸರಳ ಮತ್ತು ಸ್ಪಷ್ಟ, ನೇರ ಮತ್ತು ಶುದ್ಧ. ಮಾನವ ಜನ್ಮ ದೊಡ್ಡದು, ಭಾಗವತನಾರು, ನವವಿಧ ಭಕ್ತಿ ಎಂದರೇನು? ಹರಿದಾಸರಿಗೆ ಸರಿಯಾರು? ಇಂತಹ ವಿಷಯಗಳನ್ನು ತಿಳಿಹೇಳುವ ಸರಳವಾದ ಪದಗಳು ಅಸಂಖ್ಯಾತ, ಅವುಗಳನ್ನೆಲ್ಲ ಸೇರಿಸಿ, ಪರಿಷ್ಕರಿಸಿ, ಪುರಂದರದಾಸರ ಪದಗಳನ್ನು ಒಂದೆಡೆ ತರುವ ಕಾರ್ಯವನ್ನು ಸಮರ್ಪಕವಾಗಿ ಡಾ|| ಕೃಷ್ಣಶರ್ಮ ಬೆಟಗೇರಿ ಮತ್ತು ಬೆಂಗೇರಿ ಹುಚ್ಚರಾಯರು ಮಾಡಿದ್ದಾರೆ. ಅವರ ಶ್ರಮವು ಸಾರ್ಥಕ.

ಪುರಂದರದಾಸರು ದ್ವೈತ ಸಿದ್ಧಾಂತವನ್ನು ಅರಗಿಸಿಕೊಂಡವರು. ಆ ತಿರುಳೇ ಅವರ ಸಾಹಿತ್ಯ. ಅದು ಗುಡಿಸಲಿನಿಂದ ಅರಮನೆಯವರೆಗೂ, ಸಾಮಾನ್ಯ ಬೀದಿಗಳಿಂದ ರಾಜಬೀದಿಗಳವರೆಗೂ ತಾಳ–ಮೇಳವಾಗಿಯೇ ಬೆಳಕು ಬೀರಿದೆ. ಅಲ್ಲೆಲ್ಲ ವ್ಯವಹಾರ ತಾರತಮ್ಯ ಜ್ಞಾನವು ನಿಚ್ಚಳವಾಗಿದ್ದು ಮಹಾತ್ಮ್ಯಜ್ಞಾನವನ್ನು ಸಾಕ್ಷಾತ್ಕರಿಸಿದೆ.

ದಾಸರ ದೇವತಾಸ್ತುತಿಪರ ಪದಗಳನ್ನೇ ಎತ್ತಿಕೊಂಡರೂ ಅಲ್ಲಿಯೂ ಮಾಹಾತ್ಮ್ಯಜ್ಞಾನದ ಬೆಳಕು ಕಣ್ಣಿಗೂ ಮನಕ್ಕೂ ಆಪ್ಯಾಯಮಾನ. ಅಲ್ಲಿ ಬಳಸಿರುವ ಭಾಷೆ ಆತ್ಮೀಯ. ಸೌಜನ್ಯ ಅಂತಃಕರಣಗಳನ್ನು ಚಿತ್ತರಿಸುವ ಸೊಗಸೇ ಸೊಗಸು ಅಲ್ಲಿ. ಗಣಪತಿ, ವಿದ್ಯಾಭಿಮಾನಿ ಸರಸ್ವತಿಯರನ್ನು ಬೇಡುವುದೇ ಆಗಲಿ, ಭೀಮಗಡ್ಡೆಯಿಪುರಾರು, ಕೂಸನು ಕಂಡಿರಾ ಎಂಬಂತಹ ಕಡೆಗೆ ಇರುವ ಗೌರವಗಳಾಗಲಿ, ಪಾಂಡುರಂಗನನ್ನು ಅಪ್ಪ ಬಾರೋ ತಿಮ್ಮಪ್ಪ ಬಾರೋ ಎಂದು ಭಕ್ತನು ಭಕ್ತಿಯ ಮಹಿಮೆಯನ್ನು ತಿಳಿದುಕೊಂಡವನಾಗಿರಬೇಕು. ಶ್ರವಣ, ಕೀರ್ತನೆ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ–ಇತ್ಯಾದಿ ನವವಿಧ ಭಕ್ತಿ ಪಾರಮ್ಯವನ್ನು ಸೂಕ್ಷ್ಮವಾಗಿ ಅರ್ಥಮಾಡಿಕೊಂಡು ಅನುಷ್ಠಾನಕ್ಕೆ ತಂದುಕೊಂಡಿರಬೇಕಾಗುತ್ತದೆ. ಈ ಬಲದಿಂದ ಅಂತಹ ಸಾಧಕರಿಗೆ ಪರಮಾತ್ಮನು ಬಾಳೆಯ ಹಣ್ಣಾಗಿ, ಕಲ್ಲುಸಕ್ಕರೆಯಾಗಿ, ಪಕ್ವಾನ್ನವಾಗಿ ಬಿಡುತ್ತಾನೆ. ಅಷ್ಟೆ ಏಕೆ ಆತನು ಅವರ ತೊಡೆಯಮೇಲಾಡುವ ಮಗುವೇ ಆಗಿಬಿಡುತ್ತಾನೆ. ಅದೇ ಗೋಪಿಯ ಭಾಗ್ಯ, ಈ ತರಹದ ಭಾಗ್ಯವನ್ನು ನೀಡುವವರು ಸಾಮಾನ್ಯ ಮಕ್ಕಳಾಗಿರುವುದಿಲ್ಲ. ಇದು ಸಾಮಾನ್ಯರಿಗೆ ಸಲ್ಲುವುದೂ ಇಲ್ಲ. ಹೀಗೆ ಪರಮಾತ್ಮನನ್ನು ವಾತ್ಸಲ್ಯದಿಂದ ಕಾಣುವ, ಕಂಡು ಹಾಡಿ ಕುಣಿಯುವ ಭಾಗ್ಯ, ದಾಸಸಾಹಿತ್ಯದ್ದು. ಅದರಲ್ಲಿಯೂ ಪುರಂದರದಾಸರ ಸಾಹಿತ್ಯವು ಈ ನಿಟ್ಟಿನಲ್ಲಿ ವೈಶಿಷ್ಟ್ಯಪೂರ್ಣ.

ಪರಮಾತ್ಮನನ್ನು ಮಗುವೆಂದು ಆಡಿಸಿ ಸಂತುಷ್ಟರಾದ ದಾಸರು ತಮ್ಮ ಅಪಾರ ಲೋಕಾ

# ದಾಸರ ಕೃತಿಗಳು

ಕರೆಯುವುದಾಗಲೀ–ಇವೆಲ್ಲ ಪರಮಾತ್ಮ–ಭಕ್ತರಲ್ಲಿರುವ ಆತ್ಮೀಯ ಭಾವನೆಯನ್ನು ಜಾಗೃತಗೊಳಿಸುತ್ತವೆ. ಪರಮಾತ್ಮನು ಎಲ್ಲಿಯೋ ದೂರ ವೈಕುಂಠದಲ್ಲಿ ವಾಸಿಸುವವನಲ್ಲ. ಅವನು ಇಲ್ಲಿಯೇ ನಮ್ಮೊಡನೆಯೇ, ನಮ್ಮಲ್ಲಿಯೇ ನೆಲೆಯಾಗಿ ನಿಂತಿರುವವನು ಎಂಬ ಭಾವನೆಯನ್ನು ಇಂಬುಗೊಳಿಸುತ್ತವೆ.

ಪರಮಾತ್ಮನೊಡನೆ ಒಡನಾಟ ಸಮೀಪವಾಗಿದ್ದು ಆತ್ಮೀಯವಾಗಿರುವುದರಿಂದಲೇ, ದಾಸರ ಪದಗಳಲ್ಲಿ ಆತ್ಮನಿವೇದನೆಯು ಪರಿಣಾಮಕಾರಿಯಾಗಿದೆ. ಅಲ್ಲಿ ಆತ್ಮ ಪರಿಶೋಧನೆಯೂ ಇರುವುದರಿಂದ, ಭಕ್ತನಿಗೆ ತನ್ನ ಅರಿವೇ ನಿಚ್ಚಳವಾಗಿ ಆ ಬೆಳಕಿನಲ್ಲಿ ಪರಮಾತ್ಮನ ರೂಪು ತೀರ ಸ್ಪಷ್ಟವಾಗತೊಡಗುತ್ತದೆ. ಅನೇಕ ಕಡೆ ಇಂತಹ ಸಂದರ್ಭದಲ್ಲಿ ನಿಂದಾಸ್ತುತಿಯು ಆತ್ಮೀಯತೆಯನ್ನು ಬಲಗೊಳಿಸುತ್ತದೆ.

ಪರಮಾತ್ಮನೊಡನೆ ಆತ್ಮೀಯತೆಯು ಸಮರ್ಪಕವಾಗಬೇಕಾದರೆ ಸಾಧಕನು ಅರ್ಥಾತ್

**ಪ್ರೊ|| ವಸಂತಕುಷ್ಟಗಿ**

ನುವದ ಹಿನ್ನೆಲೆಯಲ್ಲಿ ನರ ಜನ್ಮದ ಸಾಧನ ಕ್ರಮವನ್ನು ಚಿತ್ತರಿಸಿ ಲೋಕ ಕಲ್ಯಾಣವನ್ನು ಎಸಗಿದ್ದಾರೆ, ಅಂತೆಯೇ ಧರ್ಮವೇ ಜಯವೆಂಬ ದಿವ್ಯ ಮಂತ್ರವೆಂದು ಬೋಧಿಸಿ, ಅರ್ಥವಿಲ್ಲದ ಮಡಿ, ರೊಕ್ಕ, ಅಜ್ಞಾನಿಗಳ ಕೂಡ ಜಗಳ–ಇತ್ಯಾದಿ ಸಲ್ಲವು ಎಂದು ಒತ್ತಿ ಹೇಳಿರುವುದನ್ನು ಗಮನಿಸಬಹುದು. ಮಾಡಬೇಕಾದುದು ಏನು? ಮಾಡಬಾರದುದು ಯಾವುದು?–ಇವುಗಳ ತಾರತಮ್ಯಗಗಳನ್ನು ಸ್ಪಷ್ಟಗೊಳಿಸಿರುವುದನ್ನು ಕಾಣಬಹುದು.

ದಾಸರು ತಮ್ಮ ಲೋಕಾನುಭವದ ಹಿನ್ನೆಲೆಯಲ್ಲಿ ಹಾಡಿದ ಹಾಡುಗಳಂತೆ ಅವರ ಜೀವನಾನುಭವ ಚಿತ್ರಗಳನ್ನು ಅವರ ಹಾಡುಗಳು ಸೆರೆಹಿಡಿದಿವೆ. ಅಂತಹ ಚಿತ್ರಗಳು ರೋಮಾಂಚನಕಾರಿ ಹಾಗೂ ಹೃದಯಸಂಸ್ಕಾರಿ. ಅಷ್ಟೇ ಅಲ್ಲ ಲೋಕವನ್ನೇ ಪಾವನಗೊಳಿಸುವ ತೀರ್ಥ ಸಂಚಯ. ದಂಡಿಗೆ ಬೆತ್ತ, ಗೋಪಾಳ ಬುಟ್ಟಿ, ತುಳಸಿಮಾಲೆ ಇತ್ಯಾದಿ ವಸ್ತುಗಳಿಗಾಗಿ ನಿರಾಸಕ್ತತೆಯು ದಾಸರಿಗೆ, ದಾಸರಾಗುವ ಮುನ್ನ ಇದ್ದಿತು. ಅದನ್ನು ಅವರಿಂದ ನಿವಾರಿಸಿದವರು ಅವರ ಪತ್ನಿ, ಅದಕ್ಕಾಗಿ ಕೃತಜ್ಞತಾ ಪೂರ್ವಕವಾಗಿ "ಹೆಂಡತಿ ಸಂತತಿ

(21ನೇ ಪುಟ ನೋಡಿ)

# ದಾಸರು ಹಾಗೂ ಭಾಗವತ

ಜ್ಞಾನ ಭಕ್ತಿ ವೈರಾಗ್ಯ ಧುರೀಣರಾದ ಪುರಂದರದಾಸರ ಕೃತಿ ನಾಣ್ಯಗಳು ಭಾರತ, ಭಾಗವತ, ರಾಮಾಯಣಗಳೆಂಬ ಟಂಕಸಾಲೆಯಲ್ಲಿ ತಯಾರಾದವುಗಳು. ಅವರ ಕೃತಿಗಳಿಂದ ಜೀವನಕ್ಕೆ ಶಾಂತಿ, ಆತ್ಮಕ್ಕೆ ಮುಕ್ತಿ ಮನಸ್ಸಿಗೆ ಆಹ್ಲಾದ ಲಭಿಸುತ್ತವೆ. ಸರಳವಾದ ಭಾಷೆ, ಮಧುರವಾದ ಪದಪುಂಜ, ಪ್ರಾಸಬದ್ಧವಾದ ಪಂಕ್ತಿಗಳು ಪುರಂದರ ಸಾಹಿತ್ಯದ ವೈಶಿಷ್ಟ್ಯ. ಪೌರಾಣಿಕ ದೃಷ್ಟಾಂತಗಳಿಂದ ತಮ್ಮ ಹೇಳಿಕೆಗಳನ್ನು ಸೃಷ್ಟಿಪಡಿಸಿ ಸಮರ್ಥಿಸುವುದನ್ನು ಅವರ ಕೃತಿಗಳಲ್ಲಿ ಉದ್ದಕ್ಕೂ ಕಾಣುತ್ತೇವೆ. ಇದು ಅವರ ಶೈಲಿಯ ಒಂದು ಗುಣವಾಗಿದೆ. ಜನಸಾಮಾನ್ಯರಿಗೆ ಸುಪರಿಚಿತವಾದ ಪೌರಾಣಿಕ ಕಥೆಗಳನ್ನು ಅಳವಡಿಸಿ ಸುಲಭ ಶೈಲಿಯಲ್ಲಿ ಭಗವಂತನ ಮಹಿಮೆ ನಿರೂಪಿಸಿದ್ದಾರೆ.

ವೇದ ಉಪನಿಷತ್ತು ಪುರಾಣಶಾಸ್ತ್ರಾದಿ ಜ್ಞಾನ ಸಂಪನ್ನರಾದ ಪುರಂದರ ದಾಸರು ತಮ್ಮ ಕೃತಿಗಳಲ್ಲಿ ಅವುಗಳ ಗೂಢಾರ್ಥವನ್ನು ಭಟ್ಟಿ ಇಳಿಸಿದರು. ವೈಷ್ಣವ ಸಂಪ್ರದಾಯದವರಾದ ದಾಸರು ವಿಷ್ಣುವನ್ನು ಕುರಿತು ರಚಿತವಾದ ಎಲ್ಲ ಪುರಾಣ, ಇತಿಹಾಸ, ಕಾವ್ಯಗಳನ್ನು ಮನ್ನಿಸಿದರು. ಶ್ರೀಮದ್ಭಾಗವತವನ್ನು ಶ್ರುತಿ ಸಮಾನವೆಂದು ಪರಿಗಣಿಸಿದರು. ಅದು ಭಗವನ್ನಾಮ ಸಂಕೀರ್ತನವೆಂಬ ಚಿನ್ನದ ಅದುರಿನ ಗಣಿಯಿದ್ದಂತೆ, ದಾಸರು ಗಣಿಯಿಂದ ಚಿನ್ನವನ್ನು ಗಡ್ಡೆಗಡ್ಡೆಗಳಾಗಿ ಕಾಯ್ದುಕೊಂಡು ತಮ್ಮ ಕೃತಿಗಳಲ್ಲಿ ಪುಟವಿಟ್ಟಿದ್ದಾರೆ. ಭಾಗವತ ಪುರಾಣದಲ್ಲಿಯ ಪ್ರಸಿದ್ಧರಾದ ಹರಿಭಕ್ತರ ಚರಿತ್ರೆಗಳನ್ನು ಬಳಸಿಕೊಂಡಿದ್ದಾರೆ. ಕೃಷ್ಣಾವತಾರದಲ್ಲಿಯ ವಿವಿಧ ಸನ್ನಿವೇಶಗಳನ್ನು ಸ್ಮರಿಸಿಕೊಂಡಿದ್ದಾರೆ. ಕರಿ ಮಕರಿಗೆ ಸಿಲುಕಿ ಮೊರೆಯಿಡುವಾಗ, ಪ್ರಹ್ಲಾದನ ಪಿತ ಬಾಧಿಸುತ್ತಿರುವಾಗ, ಸಭೆಯಲ್ಲಿ ಅಬಲೆಯ ಸೀರೆ ಸೆಳೆವಾಗ, ಯಮನ ದೂತರು ಬಂದು ಅಜಾಮಿಳನೆಳೆವಾಗ, ಹಸುಳೆ ಆ ಧ್ರುವರಾಯ ಅಡವಿಗೆ ಪೋಪಾಗ, ಅವರನ್ನೆಲ್ಲ ಕಾಯ್ದ ಭಾಗವಂತನನ್ನು ಸಂತೋಷ ತುಂದಿಲರಾಗಿ ಹೊಗಳಿದ್ದಾರೆ. ಸಾಮಾನ್ಯವಾಗಿ ಎಲ್ಲ ಭಾರತೀಯರಿಗೆ ವಿಶೇಷತಃ ಹಿಂದುಗಳಿಗೆ ಈ ಎಲ್ಲ ಪ್ರಸಂಗಗಳು (ಗಜೇಂದ್ರಮೋಕ್ಷ, ನರಸಿಂಹ ಪ್ರಾದುರ್ಭಾವ, ದ್ರೌಪದಿಯ ವಸ್ತ್ರಾಪಹರಣದ ಪ್ರಯತ್ನ, ಅಜಾಮಿಳನ ವೃತ್ತಾಂತ, ಧ್ರುವ ಚರಿತ್ರೆ) ಕೆಲವರಿಗೆ ಸಂಸ್ಕಾರ ಪರಿಸರಗಳಿಂದ, ಕೆಲವರಿಗೆ ಅಧ್ಯಯನದ ಅಭ್ಯಾಸದಿಂದ, ಇನ್ನೂ ಕೆಲವರಿಗೆ ಶ್ರವಣಾದಿಗಳಿಂದ, ಅಥವಾ ಇನ್ನಿತರ ಮಾಧ್ಯಮಗಳಿಂದ ಪರಿಚಯವಿರುತ್ತದೆ. ಅವರ ಪರಿಚಯದ ಪ್ರಸಂಗವನ್ನು ಬಳಸಿಕೊಂಡು ದೇವರ ದೊಡ್ಡತನವನ್ನು ನಿರೂಪಿಸುವುದು ಪುರಂದರದಾಸರ ಉದ್ದೇಶ. ಪುರಾಣ ಕಥೆಗಳನ್ನು ಬಳಸಿಕೊಳ್ಳುವಾಗ ಪುರಂದರದಾಸರು ಮಧ್ವ ಸಿದ್ಧಾಂತದ ಪ್ರಮೇಯಗಳನ್ನು ಅಳವಡಿಸಿಕೊಂಡಿರುವುದು ಕಾಣುತ್ತೇವೆ. ಒಂದೊಂದು ಸಲ ದ್ವೈತ ತತ್ತ್ವದ ಪ್ರತಿಪಾದನೆ ಹಾಗು ಸಮರ್ಥನೆಗಾಗಿಯೇ ಕೆಲವು ಭಾಗವತದ ಪ್ರಸಂಗಗಳನ್ನು ಬಳಸಿರುವುದು ಕಂಡು ಬರುತ್ತದೆ. ಉದಾಹರಣೆಗಾಗಿ ಹರಿಯೇ ಸರ್ವೋತ್ತಮನೆಂಬ ಸಮರ್ಥನೆಗಾಗಿ ಬಲಿ-ಬಾಣರ ಕಥೆ, ಜೀವಾತ್ಮರು ಹರಿಯ ಅನುಚರರು ಎಂಬುದಕ್ಕೆ (ದಾಸೋಹಂ) ಹಿರಣ್ಯಕಶಿಪು ಮೊದಲಾದವರ ಪ್ರಸಂಗಗಳನ್ನು ನೋಡಬಹುದು. ಮಧ್ವಾಚಾರ್ಯರು ಸಕಲ ಆಗಮಗಳ ಪ್ರಮಾಣವಾಗಿ ದ್ವೈತ ತತ್ತ್ವ ಸಾರಿದರೆ ದಾಸರು ಪುರಾಣಗಳ ವಿಶೇಷತಃ ಭಾಗವತದ ಪ್ರಸಂಗಗಳ ದೃಷ್ಟಾಂತದಿಂದ ಪ್ರಚಾರ ಮಾಡಿದ್ದಾರೆ. ಪುರಂದರದಾಸರು ಭಾಗವತದ ವಸ್ತುವನ್ನು ಬಳಸಿ ತಮ್ಮ ತಂತ್ರದಿಂದ ಸುಮಧುರವಾಗಿ ಹಾಡಿದ್ದಾರೆ. ದಾಸರು ತಮ್ಮ ಕೃತಿಗಳಲ್ಲಿ ಭಾಗವತದ ರಚನೆ ಅದರ ಶ್ರವಣದಿಂದಾಗುವ ಲಾಭ ಮತ್ತು ಅದಕ್ಕೆ ದೃಷ್ಟಾಂತ, ಭಾಗವತದ ಮಹಾತ್ಮೆ ಮತ್ತು ಭಾರತೀಯ ವೈದಿಕ ಸಾಹಿತ್ಯದಲ್ಲಿ ಭಾಗವತದ ಸ್ಥಾನವನ್ನು ಕುರಿತು ಕೆಲವು ಕೃತಿಗಳಲ್ಲಿ ಉಲ್ಲೇಖಿಸಿದ್ದಾರೆ. ಅಂತಹ ಅವರ ಹೇಳಿಕೆಗಳ ಸಂಗ್ರಹ ಇಲ್ಲಿ ಸೂಚಿಸುವುದು ಸೂಕ್ತವೆನಿಸುತ್ತದೆ.

ನಂಬಿದ ಭಕ್ತರನ್ನು ಪರಮಾತ್ಮನು ರಕ್ಷಿಸಿರುವುದನ್ನು ಮತ್ತೆ ಮತ್ತೆ ನೆನಪಿಗೆ ತಂದುಕೊಂಡು ದಾಸರು, ಅಂತಹ ಭಕ್ತವತ್ಸಲನನ್ನು ಅನವರತವೂ ಪಾಡುವೆನೆಂದು ಸಂಕಲ್ಪ ಮಾಡಿರುವುದನ್ನು ಐದು ನುಡಿಗಳ ಈ ಕೆಳಗಿನ ಕೃತಿಯಲ್ಲಿ ನೋಡಬಹುದು. ಇವರಲ್ಲಿಯ ಮೊದಲನೇ ನುಡಿ ಶುಕಮಹರ್ಷಿಗಳಿಂದ ಭಾಗವತ ಕಥೆಯನ್ನು ಕೇಳಿ ಪಾವನನಾದ ಪರೀಕ್ಷಿತನನ್ನು ಉದ್ಧರಿಸಿದ್ದಾಗಿದೆ.

ಆತನ ಪಾಡುವೆ ನನವರತ,
ಪ್ರೀತಿಯಿಂದಲಿ ತನ್ನ ಭಕುತರ
ಸಲಹುವ
ಆವಾತನ ಕೀರ್ತಿಯನು ಪರೀಕ್ಷಿತ ಕೇಳಿ,
ಪಾವನನಾದನು ಮೂಜಗವರಿಯೆ,
ಭಾವಶುದ್ಧಿಯಲಿ ಶುಕನಾರನು
ಪೊಗಳುವ,
ಆವಗಂ ಪ್ರಹ್ಲಾದನಾವನ ನೆನೆವನಯ್ಯ

ಇದರಿಂದ ತಿಳಿದುಬರುವ ವಿವರಗಳೆಂದರೆ "ಭಾಗವತವನ್ನು ಶುಕಮಹರ್ಷಿಗಳು ಪರೀಕ್ಷಿತನಿಗೆ ಭಕ್ತಿಯಿಂದ ಬೋಧಿಸಿದರು, ಭಾಗವತದಲ್ಲಿ ಭಗವಂತನ ಕೀರ್ತಿಯ ವರ್ಣನೆಯಿದೆ, ಅದರ ಶ್ರವಣದಿಂದ ಪರೀಕ್ಷಿತನು ಪಾವನನಾದನು ಆ ವಿಷಯ ಮೂರು ಲೋಕದ ಜನರಿಗೆ ಸುವಿದಿತವಾದದ್ದು."

ಆ ಸಂಸ್ಕಾರ ಅಥವಾ ಯೋಗ ಪರೀಕ್ಷಿತನಿಗೆ ಬಂಬೇಕಾದರೆ ಅವನ ಪೂರ್ವ ಜನ್ಮದ ಪುಣ್ಯಫಲ ಅವನು ತಾಯಿಯ ಗರ್ಭದಲ್ಲಿರುವಾಗಲೇ ಶ್ರೀಹರಿಯ ರಕ್ಷಣೆಯಿಂದ ಬದುಕಿದ ಪರೀಕ್ಷಿತನ ಜನನ ವಿಷಯವನ್ನು ಒಂದು ಕಡೆ ಉಲ್ಲೇಖಿಸಿದ್ದಾರೆ. 'ಉತ್ತರೆಯ ಗರ್ಭದಿ ಸುತ್ತಲಸ್ತ್ರವಿರೆ, ಚಿತ್ತಜಪಿತ ನಿನ್ನ ನಾಮವೇ ಕಾಯ್ದಿತ್ತೋ'

ಡಾ|| ವಾಸುದೇವ ಅಗ್ನಿಹೋತ್ರಿ

ಈ ಕೆಳಗಿನ ಕೃತಿಯಲ್ಲಿ ಹರಿಸರ್ವೋತ್ತಮತ್ವವನ್ನು ಸಮರ್ಥಿಸುತ್ತ ಭಾರತೀಯ ಧಾರ್ಮಿಕ ಗ್ರಂಥಗಳಲ್ಲಿ ಶ್ರೀಮದ್ಭಾಗವತದ ಸ್ಥಾನವನ್ನು ನಿರ್ದೇಶಿಸಿದ್ದಾರೆ.

ವಿಧಾತೃದೇವತೆಗಳೆಲ್ಲ ವಿಷ್ಣುವಿನ ಹಿಂದೆ
ಇದಕ್ಕೆ ತಪ್ಪಿದರೆ ಫಣಿಫಣವ ಪಿಡಿವೆ
ಸಕಲ ತೀರ್ಥಗಳೆಲ್ಲ ಸಾಲಿಗ್ರಾಮದ ಹಿಂದೆ
ಪ್ರಕಟ ಗ್ರಂಥಗಳೆಲ್ಲ ಭಾಗವತದ ಹಿಂದೆ

ಈ ಕೃತಿಯಲ್ಲಿ ಪಕ್ಷದಲ್ಲಿ ಏಕಾದಶಿಗೆ, ತೀರ್ಥಗಳಲ್ಲಿ ಸಾಲಿಗ್ರಾಮದ ತೀರ್ಥಕ್ಕೆ, ವೃಕ್ಷಗಳಲ್ಲಿ ತುಳಸಿವೃಕ್ಷಕ್ಕೆ, ಪರ್ವತಗಳಲ್ಲಿ ಮೇರುವಿಗೆ, ದಾನಗಳಲ್ಲಿ ಅನ್ನದಾನಕ್ಕೆ, ಉತ್ತಮ ಗುಣಗಳಲ್ಲಿ ಉದಾರತ್ವಕ್ಕೆ, ಸಲ್ಲಬೇಕಾದ ಸ್ಥಾನ ದೇವತೆಗಳಲ್ಲಿ ವಿಷ್ಣುವಿಗೆ ಸಲ್ಲುತ್ತವೆ, ಎಂದು ಹೇಳುತ್ತ ಪ್ರಕಟ ಗ್ರಂಥಗಳೆಲ್ಲ ಭಾಗವತದ ಹಿಂದೆ ಎಂದು ಹೇಳಿರುವಲ್ಲಿ ಭಾಗವತದ ಬಗ್ಗೆ ಅವರಿಗಿರುವ ಪೂಜ್ಯಭಾವನೆ, ಹಾಗೂ ಗೌರವ ವಿದಿತವಾಗುತ್ತದೆ.

ಈ ಕೆಳಗಿನ ಕೃತಿಯ ಮೊದಲಿನ ನುಡಿಯಲ್ಲಿ ಭಾಗವತ ದ್ವಿತೀಯ ಸ್ಕಂದದ ಐದನೇ ಅಧ್ಯಾಯದಲ್ಲಿಯ ಬ್ರಹ್ಮಾನಂದ ಸಂವಾದದ ವಿಷಯವಾದ ಸೃಷ್ಟಿ, ಅದರ ಕರ್ತೃ ಮೊದಲಾದವನ್ನು ಸೂಚ್ಯವಾಗಿ ಹೇಳಿದ್ದಾರೆ. ಎಂಟನೇ ನುಡಿಯಲ್ಲಿ ಭಾಗವತದಲ್ಲಿಯ ಕಪಿಲ ದೇವಹೂತಿಯರ ಸಂವಾದವನ್ನು ಉಲ್ಲೇಖಿಸಿ ಪುರಾಣಗಳ ಕಾಲದಲ್ಲಿಯೇ ಹರಿಸರ್ವೋತ್ತಮತ್ವ ಸ್ಥಾಪಿತವಾಗಿತ್ತೆಂದು ಅಭಿಪ್ರಾಯ ಪಾಡುತ್ತಾರೆ.

ಅಂದೆ ನಿರ್ಣಯಿಸಿದರು ಕಾಣೋ,
ಇಂದಿರಾಪತಿ ಪರದೈವತವೆಂಬುದ
ಅಂದು ಚತುರ್ಮುಖ ನಾರದನಿಗೆ ತನ್ನ
ತಂದೆ ಶ್ರೀಹರಿ ಪರದೈವವೆಂದು,
ಸಂದೇಹಗಳ ಪರಿಹರಿಸಿಹ ದ್ವಿತೀಯದ,
ಸ್ಕಂದದೊಳಯ್ದನೆಯ ಅಧ್ಯಾಯದಲಿ
ಅಂದು ಕಪಿಲ ದೇವಹೂತಿಗೆ ತಾನು
ಚೆಂದದ ತತ್ತ್ವವನೆಲ್ಲ ಬೋಧಿಸಿದ

ಪುರಂದರದಾಸರ ದೃಷ್ಟಿಯಲ್ಲಿ ಭಾಗವತವು ಬಹು ಪೂಜ್ಯಗ್ರಂಥ ಹಾಗೂ ಅವರಲ್ಲಿಯ ಭಗವದ್ಭಕ್ತರು ಅವರಿಗೆ ಆದರ್ಶಪ್ರಾಯರು. ಅವರು ತಮ್ಮ ಕೃತಿಗಳಲ್ಲಿ ಭಾಗವತದಲ್ಲಿಯ ಭಕ್ತರ ಪಟ್ಟಿಯನ್ನೇ ಕೊಡುತ್ತಾರೆ.

ಅಜಮಿಳ ಅಂಬರೀಕ್ಷ ಅಕ್ರೂರ ವಿದುರಗೆ
ಗಜರಾಜ ಗಿರಿಜೇಶಗೆ,
ನಿಜಭಕ್ತ ಪ್ರಹ್ಲಾದ ಅಜಧ್ರುವ ಅರ್ಜುನಗೆ
ದ್ವಿಜಸುತರುಕ್ಮಾಂಗದರಿಗೊಲಿದ ದಯದಿಂದಲೆನ್ನ
ಅವರಂತೆ ನಾನಲ್ಲ ಅವರ ದಾಸರ ದಾಸ
ಸನರಿ ಬಿಸುಡೆನ್ನ ದೋಷ
ಅಂತರಂಗದುಬ್ಬಸವ ಅಯ್ಯೋ ನಿನಗುಸಿರುವೆನು
ಚಿಂತೆಗಳ ಪರಿಹರಿಸು ಪುರಂದರವಿಠಲನೆ

ಮೇಲಿನ ಕೃತಿಯಲ್ಲಿ ಅಜಾಮಿಳ, ಅಂಬರೀಷ, ಅಕ್ರೂರ, ಪ್ರಹ್ಲಾದ, ಧ್ರುವ, ಕುಚೇಲ, ಮೊದಲಾದ ಭಾಗವತದ ಭಕ್ತರನ್ನಲ್ಲದೆ ರಾಮಾಯಣ ಮಹಾಭಾರತದಲ್ಲಿ ಬರುವ ವಿಭೀಷಣ, ಅರ್ಜುನ, ದ್ರೌಪದಿ, ಹನುಮಂತ, ಅಹಲ್ಯೆ ಮೊದಲಾದವರನ್ನು ಉದ್ಧರಿಸಿದ್ದಾರೆ. ಮಧ್ವಮತತತ್ತ್ವದ ಪ್ರಕಾರ ಬ್ರಹ್ಮರುದ್ರರನ್ನು ಸಹ ಇಲ್ಲಿ ಶ್ರೀಹರಿಯ ದಾಸರೆಂದು ಉಲ್ಲೇಖಿಸಿದ್ದಾರೆ. "ಏಕೆ ನಿರ್ದಯನಾದೆಯೋ ಎಲೆ ದೇವನೇ" ...ಎನ್ನುವ ಈ ಕೃತಿಯಲ್ಲಿ ಪ್ರಹ್ಲಾದ, ಗಜೇಂದ್ರ, ಅಜಾಮಿಳ ವಿಭೀಷಣರನ್ನು ಮಾತ್ರ ಉಲ್ಲೇಖಿಸಿದ್ದಾರೆ.

ಅಂಜುವರಿಗೆ ದೇವ ಬ್ರಹ್ಮರಾಕ್ಷಸನಂತೆ
ಅಂಜೇನು ನಿನಗಿನ್ನು ಪುರಂದರವಿಠಲ...

ಮೂರು ನುಡಿಯ ಈ ಸುಳಾದಿಯಲ್ಲಿ ವ್ಯಂಗ್ಯವಾಗಿ ಹರಿಭಕ್ತರನ್ನು ಸ್ಮರಿಸಿದ್ದಾರೆ. ಗೋಪಿದೇವಿ, ಭೃಗು, ಭೀಷ್ಮ, ಕಾಳಿಂಗ, ಬಲಿ, ಕುಬುಜೆ, ಅರ್ಜುನ, ವಾಲಿ. ಸುಗ್ರೀವ, ಇಂದ್ರ, ಮೊದಲಾದವರನ್ನು ಮಧ್ವಮತದ ತತ್ತ್ವಗಳಿಗನುಗುಣವಾಗಿ ಸ್ಮರಿಸಿದ್ದಾರೆ, ಇನ್ನೊಂದು ಕೃತಿಯಲ್ಲಿ

ಎಂದಿಗಾದರು ನಿನ್ನ ನಂಬಿದೆ–ಚೆಲ್ವ,
ಮಂದರಧರ ಮದನಜನಕ,
ವೃಂದಾವನ ಪತಿ ಗೋವಿಂದ...

ಮೂರು ನುಡಿಯ ಈ ಕೃತಿಯಲ್ಲಿ ಭಕ್ತರ ಆಪತ್ಕಾಲದಲ್ಲಿ ಒದಗಿದ ಹರಿಗೆ ಪರಾಕು ಹೇಳಿ ತಮ್ಮನ್ನು ಕೂಡಾ ಭವಬಂಧನದಿಂದ ರಕ್ಷಿಸಲು ಮೊರೆಯಿಡುತ್ತಾರೆ. ಇದರಲ್ಲಿ ದ್ರೌಪದಿ, ಪ್ರಹ್ಲಾದ, ಅಹಲ್ಯಾ, ಅಜಾಮಿಳ, ಧ್ರುವ, ವಿಭೀಷಣ, ರುಕುಮಾಂಗದ, ವ್ಯಾಸ, ನಾರದ, ಬಲಿ, ಅರ್ಜುನ, ಹನುಮಂತ, ಅಂಬರೀಷ, ಮೊದಲಾದವರನ್ನು ಉದ್ಧರಿಸಿ ಶ್ರೀಹರಿಗೆ–ಶರಣು ಹೃದಯ ಸರಸಿಜ ಪರಮಪಾವನ ಗೋವಿಂದ ಕರಿವರದ ಕಾಯೊ– ಎಂದು ಬೇಡಿಕೊಳ್ಳುತ್ತಾರೆ. ಸುಳಾದಿಯ ನುಡಿಯೊಂದರಲ್ಲಿ "ಅಕ್ರೂರ ಪ್ರಹ್ಲಾದ ಅಂಬರೀಷ, ಅಜಾಮಿಳ, ನಕ್ರಪೀಡಿತ ಗಜೇಂದ್ರ, ಕುಚೇಲ ಯಾವತ್ಪರಿವಾರ, ಚಕ್ರಧಾರಿ ಕೃಷ್ಣನ ನಂಬಿದವರ, ಅಕ್ಷರದಿಂದಲಿ ಸಲಹಿದ ಪುರಂದರವಿಠಲ" ಎಂದು ಸಮಾಧಾನ ಪಡುತ್ತಾರೆ.

ಹೀಗೆ ಹರಿಭಕ್ತರ ಕೃತಿಗಳನ್ನು ಬೆಳೆಸುತ್ತ ಹೋಗಬಹುದು. ಇದರಿಂದ ಪುರಂದರದಾಸರಿಗೆ ಭಾಗವತ ಭಕ್ತರ ಬಗ್ಗೆ ಎಷ್ಟೊಂದು ಭಕ್ತಿಯಿತ್ತು ಹಾಗೂ ಅವರ ದೃಷ್ಟಾಂತಗಳು ಆದರ್ಶವಾಗಿದ್ದವೆಂಬುದು ತಿಳಿಯುತ್ತದೆ. ನಾರಾಯಣ ನಾಮವನ್ನು ಒಂದು ಬೀಜಕ್ಕೆ ಹೋಲಿಸಿ ಆ ಬೀಜವು ಮೊಳೆತು ಚಿಗುರಿ ಹೂ ಫಲಬಿಟ್ಟು ಹಣ್ಣಾಗಿ ಅದನ್ನು ತಿಂದು ಧನ್ಯರಾದ ಭಕ್ತರ ವಿಚಾರವನ್ನು ಹೇಳುತ್ತದೆ. ಧ್ರುವ, ಅಜಾಮಿಳ, ಪ್ರಹ್ಲಾದ, ಬಲಿ (ವಾಮನಾವತಾರ) ಗಜೇಂದ್ರ, ಅಂಬರೀಷ ಈ ಭಾಗವತ ಭಕ್ತರಲ್ಲದೆ ಭಾಗವತದಲ್ಲಿಯ ಸಮುದ್ರ ಮಥನ, ಮೋಹಿನಿ ಅವತಾರದ-ಪ್ರಸಂಗಗಳು ದಾಸರ ಮನಸ್ಸನ್ನು ಸಾಕಷ್ಟು ಆಕರ್ಷಿಸಿವೆ.

ಒಟ್ಟಿನಲ್ಲಿ ಶ್ರೀಮದ್ಭಾಗವತವು ಪುರಂದರದಾಸರ ದೃಷ್ಟಿಯಲ್ಲಿ ಒಂದು ಪರಮಪೂಜ್ಯ ಗ್ರಂಥ.

# ವಾತ್ಸಲ್ಯಭಾವದ ಕೃತಿಗಳು

ಗೋಪಾಲಕರಾಗಿ ಬದುಕುತ್ತಿದ್ದ ಯಾದವಕುಲದಲ್ಲಿ ಸೇರಿ, ತಾನೂ ಗೋಪಾಲಕನಾಗೇ ಬೆಳೆಯುತ್ತ, ಮಾತೆಗೆ ಮಮತೆಯ ಮಗುವಾಗಿ, ಗೆಳೆಯರಿಗೆ ಉತ್ತಮ ಸಖನಾಗಿ, ಗೋಪಿಯರಿಗೆ ಶುದ್ಧ ಪ್ರೇಮಿಯಾಗಿ ತನ್ನ ಕಷ್ಟವೇನೇ ಇದ್ದರೂ ನಂಬಿದವರ ನೋವು ನಲಿವುಗಳಲ್ಲಿ ಭಾಗಿಯಾಗಿ ಭಕ್ತವತ್ಸಲನಾದ ಪುರಾಣ ವ್ಯಕ್ತಿ ಶ್ರೀಕೃಷ್ಣ. ಕೃಷ್ಣನು ಹೀಗೇ, ಇಷ್ಟೇ, ಎನ್ನಲು ಸಾಧ್ಯವೇ ಇಲ್ಲ. ಏಕೆಂದರೆ ಅವನು ಯೋಗಿಯೋ, ಭೋಗಿಯೋ ಶೀರ್ಮಾನಿಸಲಾಗದ ಮಮತೆಯ ಮೂರ್ತಿ ಯಾದರೂ ಮೋಹದ, ಮಾಯೆಗೆ ಸಿಲುಕಿ ದವನಾಗಿ ಜಗನ್ನಾಟಕ ಸೂತ್ರಧಾರನಾಗಿ, ತೆರೆಮರೆಯಲ್ಲೇ ಇದ್ದು ಆಡಿಸಿ ಆನಂದಿಸುತ್ತಿದ್ದುದರಿಂದಲೇ ಶ್ರೀಕೃಷ್ಣನ ಬಗ್ಗೆ ಪುರಂದರದಾಸರಿಗೆ ಪೂರ್ಣ ಭಕ್ತಿ.

ಈಗ ಪುರಂದರದಾಸರ ಕೃಷ್ಣಭಕ್ತಿ ಅವರ ಕೆಲವು ಕೀರ್ತನೆಗಳಲ್ಲಿ ಹೇಗೆ ಪೂರ್ಣ ಪ್ರೇಮವಾಗಿ, ಭಕ್ತಿಯ ಮಹಾಪೂರವಾಗಿ ಹರಿದಿದೆ ಎಂಬುದನ್ನು ನೋಡೋಣ–

ತಾವೇ ಯಶೋದೆಯಾಗಿ, ದೂರುವ ಗೋಪಿಯರಾಗಿ ರಚಿಸಿದ ರಚನೆಗಳು—

"ಆಡಿಸಿದಳೆಶೋದೆ, ಜಗದೋದ್ಧಾರನ ಮಗನೆಂದು ತಿಳಿಯುತ" ಎಂದು ಆಡಿಸಿ ನಲಿಯುತ್ತಿರಲು ತುಂಟ ಕೃಷ್ಣ ಅಮ್ಮನ ಕಣ್ತಪ್ಪಿಸಿ ಆಡಲು ಓಡಿದ. ಅರೆಕ್ಷಣ ನೋಡದಿದ್ದರೂ ಗಾಬರಿಗೊಳ್ಳುವ ಯಶೋದೆ. ಮನೆ ಮನೆಯಲ್ಲೂ, ಕೇರಿಕೇರಿಯಲ್ಲೂ ಸುತ್ತಿ ಹುಡುಕುತ್ತ—

ಕಂದನ ಕಾಣಿರೇನೇ ಎನ್ನಯ ಕಂದ
ಕಂದನಲ್ಲವೆ ಎನ್ನ ಕುಂದಣವರಣೆಯೆ
ಉಂಗುರವಿಟ್ಟದ್ದೆ ಉಡಿದಾರ ಕಟ್ಟಿದೆ...
ರೊಟ್ಟಿಯ ಸುಟ್ಟಿದ್ದೆ ತುಪ್ಪವ ಕಾಸಿದ್ದೆ
ಇಷ್ಟು ಹೋಯಿತು ಉಣಲಿಲ್ಲ......

ಇಷ್ಟೇ ಸಾಲದೆಂದು ಮಗನ ಗುರುತಗಳನ್ನೂ ಹೇಳುತ್ತಾ ಮತ್ತೊಂದು ಕೇರಿಯಲ್ಲಿ.

ಅಮ್ಮ ನಿಮ್ಮ ಮನೆಗಳಲ್ಲಿ
ನಮ್ಮ ರಂಗನ ಕಂಡಿರೇನಮ್ಮ
ಬ್ರಹ್ಮ ಮೂರುತಿ ನಮ್ಮ ಕೃಷ್ಣನು
ನಿಮ್ಮ ಕೇರಿಯೊಳಿಲ್ಲವೆ
ಕಾಶೀ ಪೀತಾಂಬರ ಕೈಯ್ಯಲಿ ಕೊಳಲು
ಪೂಸಿದ ಶ್ರೀಗಂಧ ಮೈಯ್ಯೊಳಗಮ್ಮ...

ಎಂದು ಕೇಳುವಳು. ಕಷ್ಟಪಟ್ಟು ಹಿಡಿದು ತಂದ ಕೃಷ್ಣ, ಮೊಲೆ ಹಾಲ ಕುಡಿಯಲೊಲ್ಲ, ಏನನ್ನೂ ತಿನ್ನಲೂ ಇಲ್ಲ. ಅಮ್ಮನಿಗೆ ಆಗಲೂ ಕಷ್ಟವೆ, ಕಷ್ಟದೊಂದಿಗೆ ಗಾಬರಿ, ಏನಾಯಿತೋ ಎಂದು ಕಾತರ ಪಕ್ಕದಲ್ಲಿ ದ್ದವರಿಗೆ ಕಂದನನ್ನು ತೋರಿಸುತ್ತ—

ಏನಾಯಿತು ರಂಗಗೆ ನೋಡಿರಮ್ಮ
ಸಿಧಾನಿಸಿ ಎನಗೊಂದು ಪೇಳಿರಮ್ಮ
ಪುಟ್ಟಿದಾರಭ್ಯ ಕಣ್ಣು ಮುಚ್ಚನಮ್ಮ
ತಾನು

ಎಷ್ಟಾದರೂ ಮೊಲೆಯುಣ್ಣನಮ್ಮ..."

ಎಂದು ಎಷ್ಟು ಮುದ್ದಿಸಿ ಉಣ್ಣಿಸಲೆಳಸಿದರೂ ಉಣ್ಣದೆ ಹೋದಾಗ ಮಮತೆ ಮೂಢ ನಂಬಿಕೆಯಾಗಿ ಮಾರ್ಪಟ್ಟು ಮನಕರಗಿ ಕೇಳುತ್ತಾಳೆ ಯಶೋದೆ,

ಉಣಲೊಲ್ಲೆ ಏಕೋ ಕಂದ
ಆವ ಗೋವಳತಿಯರ
ಕಣ್ಣು ದೃಷ್ಟಿ ತಾಗಿತಯ್ಯ
ಅನುದಿನ ನಮ್ಮೆಲ್ಲರ ಅಗಲಬಾರದೆಂದು
ಮನಸೋತು ಗೋಪಿಯರು
ಮುದ್ದಿಕ್ಕಿದರೆ......

ಎಂದು ದೃಷ್ಟಿಯನ್ನು ತೆಗೆದು, ಕೊನೆಗೆ ಸಿಟ್ಟುಗೊಂಡಂತೆ ನಟಿಸಿ ಗುಮ್ಮನು ಕರೆಯುವುದಾಗಿ ನಟಿಸಿ ಉಣಬಡಿಸುತ್ತಾಳೆ.

ಇಷ್ಟಕ್ಕೇ ಮುಗಿಯಲಿಲ್ಲ ಯಶೋದೆಯ ಬಾಧೆ. ವಯಸ್ಸು ಬೆಳೆದಂತೆಲ್ಲ ತುಂಟಾಟವೂ ಬೆಳೆಯಿತು. ಇಷ್ಟು ದಿನ ಬರೀ ತುಂಟನಾಗಿದ್ದ, ಆದರೆ ಈಗ ತುಂಟತನದೊಂದಿಗೆ ತುಡುಗಿನ ದೂರು, ಅವನ ತುಂಟತನ ಗೋಪಿಯರಿಗೂ ಮೆಚ್ಚುಗೆಯೇ—

ಕೊಳಲನೂದುತ ಬಂದ
ನಮ್ಮ ಗೋಪಿಯ ಕಂದ
ಕೊಳಲನೂದುವುದು ಬಲುಚೆಂದ...

ಕೊಳಲ ನೂದುವುದು ಚೆಂದವೇ, ಹಾಲು ಬೆಣ್ಣೆ ಕದ್ದರೂ ಸಹಿಸಬಹುದಾಗಿತ್ತೇನೋ ಆದರೆ ಇವನು ಸೆರಗಿಗೇ ಕೈಹಾಕುತ್ತಾನೆ. ಗೋಪಿಯರೂ ಹೇಳಿನೋಡುತ್ತಾರೆ—

**ಶ್ರೀ ಮು. ಕೃಷ್ಣಪ್ಪ**



ಸೆರಗ ಬಿಡೋ ರಂಗ ಸೆರಗ ಬಿಡೋ
ಕರವ ಮುಗಿಯುವೆ ಸೆರಗ ಬಿಡೋ
ಅತ್ತೆಕಂಡರೆ ಎನ್ನ ಹತ್ತಿರ ಸೇರಳು
ಹರಿಯೆ
ಚಿತ್ತದೊಲ್ಲಭ ಎನ್ನ ಸೆರಗ ಬಿಡೋ...

ಇಂತಹ ಚೇಷ್ಟೆಗಳನ್ನು ಎಷ್ಟೆಂದು ಸಹಿಸಿಯಾರು ಅವರು ತಾನೆ. ಯಶೋದೆಯ ಬಳಿ ದೂರು ಕೊಂಡೊಯ್ಯುತ್ತಾರೆ. ಒಬ್ಬಳು

ಮೆಲ್ಲನೆ ಮೆಲ್ಲನೆ ಬಂದನೆ
ಗೋಪಮ್ಮ ಕೇಳೇ
ಮೆಲ್ಲಮೆಲ್ಲನೆ ಬಂದನೆ
ಮೆಲ್ಲಮೆಲ್ಲನೆ ಬಂದು
ಗಲ್ಲಕೆ ಮುದ್ದು ಕೊಟ್ಟು
ನಿಲ್ಲದೆ ಓಡಿ ಪೋದ
ಕಳ್ಳಗೆ ಬುದ್ಧಿ ಹೇಳೆ...

-ಎಂದರೆ ಇನ್ನೊಬ್ಬಳು

ಬುದ್ಧಿ ಹೇಳೆ ಗೋಪಿ
ನಿನ್ನಮುದ್ದು ಕಂದಗೆ
ಸದ್ದು ಮಾಡಿದ್ದಾಗೆ ಬಂದು ।
ಮುದ್ದನಿಟ್ಟು ಪೋದನಮ್ಮ...

-ಎನ್ನುತ್ತಾಳೆ.

ಒಂದೊಂದಾಗಿ ಬರುತ್ತಿದ್ದ ದೂರುಗಳು ಈಗ ಒಟ್ಟಾಗಿ ಬರಲಾರಂಭಿಸುತ್ತವೆ.

ನಿನ್ನ ಮಗನು ಮುದ್ದು
ನಿನಗಾದರೆ, ಗೋಪಿ, ಯಾರಿಗೇನೇ
ಅಮ್ಮ ಎನ್ನ ಕೂಡೆ ತಾ
ಸರಸ ಮಾಡುತಾನೆ ಸಾರು ನೀನೆ
ಹೆಚ್ಚಿನ ಸತಿಯರ ಕಚ್ಚೆಯ
ಬಿಚ್ಚುವ ಹುಚ್ಚನೇನೆ ಅಮ್ಮ
ಇಚ್ಚೆಯರಿತು ನಮ್ಮ
ಗಲ್ಲನ ಕಚ್ಚುವ ನಲ್ಲನೇನೇ
ಬೇಡೆಂದ ಹೆಂಗಳ ಕುಚಗಳ
ಪಿಡಿದರೆ ಗಂಡನೇನೆ ಅಮ್ಮ
ಕಂಡಲ್ಲಿ ಉದ್ದಂಡತನ
ಮಾಡುತಾನೆ ಪುಂಡನೇನೆ...

ಈಕೆ ಇನ್ನೂ ಹೇಳಿ ಮುಗಿಸುವುದರಲ್ಲಿಯೇ ಮತ್ತೊಬ್ಬಳು ಬಿರಬಿರನೆ ಬಂದು ಪ್ರಾರಂಭಿಸಿಯೇ ಬಿಡುತ್ತಾಳೆ.

ಇವರೆಲ್ಲ ಎಷ್ಟು ದೂರಿದರೂ ಯಶೋಧೆಗೆ ಅನುಮಾನವೆ, ಏನೂ ಅರಿಯದ ತನ್ನ ಮುಗ್ಧ ಕಂದನ ಮೇಲೆ ಇವರು ಬೇಕಾಗಿಯೇ ದೂರು ಹೇಳುವರೆಂದು, ತನ್ನ ಕಂದ ಅಂತಹವನಲ್ಲವೆಂದು ಸಮರ್ಥಿಸುತ್ತಾಳೆ-

ಮೊಸರು ಸುರಿದು ಓಡುವ
ಈ ಮಾಯದ ಶಿಶುವ ತೋರಿಸು ಎನಗೆ
ಹುಸಿಯನಾಡುವುದೇಕೆ ರಂಗಗೆ
ಮೊಸರೆಂಬ ಪೆಸರೇಳಿದರಾಗದು
ಅಮ್ಮಯ್ಯ ಮಂದಿರವನು ದಾಟಿ
ನಮ್ಮ ರಂಗ ಬಂದದುಂಟೇನೆ ಎಂದು
ಹಿಂದು ಮುಂದರಿಯದೆ ದೂರಬಾರದು
ನಮ್ಮ ಕಂದ ಗೋವಳರಾಯನ...

ಎಂದು ದೂರು ಹೇಳಿದವರನ್ನೇ ದೂರುತ್ತಾಳೆ.

ಹೀಗೆ ತನ್ನ ಆರಾಧ್ಯದೈವ ಕೃಷ್ಣನ ಲೀಲೆಗಳನ್ನು ಹಿಂದೆ, ಅನುಭವಿಸಿ, ನಲಿದರೂ ಪುರಂದರದಾಸರಿಗೆ ಗೊತ್ತಿದೆ ಬದುಕು ನಶ್ವರವೆಂದು. ಅದಕ್ಕೇ ಕೇಳಿಕೊಳ್ಳುತ್ತಾರೆ

ಕಂಡು ಕಂಡು ನೀ ಎನ್ನ
ಕೈಬಿಡುವರೆ ಕೃಷ್ಣ
ಪುಂಡರೀಕಾಕ್ಷ ಪುರುಷೋತ್ತಮ ದೇವ

ಎಂದು, ಆದರೂ ಮನಸ್ಸಿಗೆ ತೃಪ್ತಿ ಇಲ್ಲ. ತಮಗೆ ತಾವೇ ಹೇಳಿಕೊಳ್ಳುತ್ತಾರೆ-

ಏನು ಮಾಡಿದರೇನು ಭವ ಹಿಂಗದು
ದಾನವಾಂತಕ ನಿನ್ನ ದಯವಾಗೋ
ತನಕ

ಎಂದು ಸಮಾಧಾನ ಮಾಡಿಕೊಂಡರೂ-

"ಆರು ಬದುಕಿದರಯ್ಯ ಹರಿನಿನ್ನ ನಂಬಿ
ತೋರು ಈ ಜಗದೊಳಗೆ
ಒಬ್ಬರನು ಕಾಣೆ
ಕಲಹ ಬಾರದ ಹಾಗೆ ಕರ್ಣನನು
ನೀ ಕೊಂದೆ
ಸುಲಭದಲಿ ಕೌರವರ ಮನೆಯ
ಮುರಿದೆ...

ಎಂದು ನಿಂದಿಸುತ್ತಾರೆ. ಆದರೆ ಮನ ನಿಲ್ಲಲೊಲ್ಲದು. ಹರಿಯನ್ನು ನಿಂದಿಸಿದ್ದಕ್ಕೆ ತಾವೇ ನೊಂದುಕೊಂಡು;

ಸರ್ವಾಪರಾಧವ ಕ್ಷಮಿಸಯ್ಯ ಎನ್ನ
ಗರ್ವಾಂಧಕಾರವ ಬಿಡಿಸಿ ರಕ್ಷಿಸು...

-ಎನ್ನುವರು.

ಇಲ್ಲೆಲ್ಲ ನಾವು ಕಾಣುವುದು ಶ್ರೀಕೃಷ್ಣ, ಯಶೋದೆ ಇವರುಗಳ ನಡುವಣ ಐಹಿಕ ಸಂಬಂಧ ಮಾತ್ರವೇ ಅಲ್ಲ; ಒಬ್ಬ ತಾಯಿ 'ಜಗದೋದ್ಧಾರನ ಆಡಿಸಿದಳು' ಎನ್ನುವಾಗ ಅವನು ಪುರುಷೋತ್ತಮ ಎಂಬುದರೊಂದಿಗೇ ಆಕೆ ಅಂತಹವನಿಗೂ ತಾಯಾದಳು ಎನ್ನುವ ಅತಿಮಾನವ ವಾತ್ಸಲ್ಯಭಾವ, 'ಬ್ರಹ್ಮ ಮೂರುತಿ ನಮ್ಮ ಕೃಷ್ಣನು ನಿಮ್ಮ ಮನೆಯೊಳಗಿಲ್ಲವೆ' ಎಂಬಲ್ಲಿ ಜೀವನು ದೇವರಿಗಾಗಿ ಹಂಬಲಿಸಿ ಹುಡುಕುವಿಕೆ, 'ಪುಟ್ಟಿದಾರಭ್ಯ ಕಣ್ಣಮುಚ್ಚಲಿಲ್ಲ, ಎಷ್ಟಾದರೂ ಮೊಲೆಯುಣ್ಣಲೊಲ್ಲ' ಎಂಬಲ್ಲಿ ಮಗುವಿನ ದೈನಿಕ ವ್ಯವಹಾರಗಳೊಂದಿಗೇ ಕೃಷ್ಣನ ದೈವತ್ವವನ್ನೂ ಸೂಚಿಸುತ್ತ ನಡೆಯುವ-ಎಲ್ಲವನ್ನು ಒಟ್ಟಿಗೆ ಹಿಡಿದು, ಒಂದೇಬಾರಿಗೆ ಎರಡು ಮಟ್ಟಗಳಲ್ಲಿ - ಒಂದು ಐಹಿಕ ಇನ್ನೊಂದು ಅಧ್ಯಾತ್ಮಿಕ - ನಡೆಯುವ ಕವನ ಕಲಾಪವನ್ನು. ಇಂತಹದೇ ರೀತಿಯಲ್ಲೇ ನಡೆಯುತ್ತದೆ ಶ್ರೀಕೃಷ್ಣ ಗೋಪಿಯರ ಸಂಬಂಧವೂ ಸಹ, ಎಂಬುದೂ ಸ್ಪಷ್ಟವೇ ಇದೆ. ಹೀಗಾಗಿಯೇ ದಾಸರ ಕೃಷ್ಣಗೀತೆಗಳು ಕನ್ನಡ ಸಾಹಿತ್ಯದ ಅತ್ಯುತ್ತಮ ಭಾವಗೀತೆಗಳಾಗಿವೆ. ★

(17ನೇ ಪುಟದಿಂದ)

ಸಾವಿರವಾಗಲಿ" ಎಂದು ಅವರು ಹೇಳಿದುದು ಒಂದು ಅರ್ಥಪೂರ್ಣಚಿತ್ರ. "ಯಾರ ಭಾಗ್ಯ ದೊಡ್ಡದು" ಎಂದು ನಿರ್ಣಯಿಸುವಲ್ಲಿ ವಿಜಯನಗರದ ಕೃಷ್ಣದೇವರಾಯನ ಸಂಪತ್ತಿಗಿಂತಲೂ, ದಾಸರ ವೈರಾಗ್ಯವೇ ಶ್ರೇಷ್ಠ ಭಾಗ್ಯವೆಂಬುದು ಧ್ವನಿಪೂರ್ಣವಾಗಿ ಬಂದುದು ಮತ್ತೊಂದು ಚಿತ್ರ. ಕನಕನ ದಿವ್ಯದೃಷ್ಟಿ, ಮುಯ್ಯಕೆ ಮುಯ್ಯ- ಇತ್ಯಾದಿ ಇನ್ನು ಅನೇಕ ಚಿತ್ರಗಳೂ ಕೂಡ ದಾಸರ ಅನುಭವ ಸಂಪದದ ಮಹಾತ್ಮ್ಯವನ್ನು ಎತ್ತಿ ತೋರಿಸುತ್ತವೆ. ಅಷ್ಟೇ ಅಲ್ಲ ಅವರ ಮಾತು ಮತ್ತು ಬದುಕು ಭಿನ್ನವಾಗಿರಲಿಲ್ಲವೆಂದೂ, ಅವುಗಳಲ್ಲಿ ಮುಚ್ಚುಮರೆ ಇರಲಿಲ್ಲವೆಂದೂ ಸ್ಪಷ್ಟಗೊಳಿಸುತ್ತವೆ.

ಒಟ್ಟಾರೆ ದಾಸರ ಅನುಭವಗಳು ವೈವಿಧ್ಯಪೂರ್ಣವಾಗಿದ್ದರೂ, ಅವುಗಳಿಂದ ಪ್ರೇರಿತರಾಗಿ ಹಾಡಿದ ಪದಗಳು ಹೊರನೋಟಕ್ಕೆ ಬೇರೆ ಬೇರೆ ಎನ್ನಿಸಿದರೂ, ಅವುಗಳಲ್ಲೆಲ್ಲ ಪರಮಾತ್ಮನ ಸಾಕ್ಷಾತ್ಕಾರದ ಹಂಬಲ ಮತ್ತು ಆತನನ್ನು ಆತ್ಮೀಯವಾಗಿ ಕಾಣುವ ಸೆಳೆತಗಳು ಎದ್ದು ಕಾಣುತ್ತವೆ. ಇವುಗಳ ಒಟ್ಟು ತುಡಿತ "ಮಾನವಜನ್ಮ ದೊಡ್ಡದು- ಇದ ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ" ಎಂದು ಲೋಕದ ಜನಕ್ಕೆ ನಿರ್ದೇಶನ ನೀಡುವುದರತ್ತವೇ ಕೇಂದ್ರೀಕೃತವಾಗಿರುತ್ತದೆ. ಇಂತಹದೇ ಚೇತೋಹಾರಿ ಸಾಹಿತ್ಯ, ಚಿರಂತನ ಸಾಹಿತ್ಯ. ★

# ದಾಸರ ಕುಟುಂಬ

## ಗೃಹಲಕ್ಷ್ಮಿ.

ಕನ್ನಡ ಕೀರ್ತನಕಾರರಲ್ಲಿ ಪುರಂದರ ದಾಸರಿಗೆ ಪ್ರತ್ಯೇಕಸ್ಥಾನವಿದೆ. ಅವರು ಕರ್ನಾಟಕ ಸಂಗೀತದ ಪಿತಾಮಹರು. ವ್ಯಾಸರಾಯರಿಂದ 'ದಾಸರಂದರೆ ಪುರಂದರ ದಾಸ'ರೆಂದು ಹೊಗಳಿಸಿಕೊಂಡ ಮಾನ್ಯರು. ಧನ ಕನಕರಾಶಿಗಳನ್ನು ತೃಣಪ್ರಾಯವಾಗಿ ತಿರಸ್ಕರಿಸಿದ ವೈರಾಗ್ಯಮೂರ್ತಿ. ಅವರು ಸತೀಸುತರನ್ನು ಕುರಿತು ಹಾಡಿದ್ದಾರೆ. ಹೊಗಳಿದ್ದಾರೆ. ಉಪದೇಶ ಮಾಡಿದ್ದಾರೆ.

ದಾಸರು ಗೃಹಸ್ಥರು. ಸನ್ಯಾಸಿಗಳಲ್ಲ. ದಾಂಪತ್ಯ ಜೀವಿತವನ್ನು ಬಿಟ್ಟು ಕಾಷಾಯ ವಸ್ತ್ರ ಧರಿಸಿದವರಲ್ಲ. ಗೃಹಸ್ಥರಾಗಿ ಭಕ್ತಿಯಿಂದ ವಿಠಲನ್ನು ಭಜಿಸಿದರೆ ಸಾಕೆಂದು ಹೇಳುವ ಆಚಾರ್ಯವರ್ಯರು. ಆದ್ದರಿಂದ;

ಮಂದಗಮನೆ ಕೂಡ
ಸರಸವಾಡುತಲೊಮ್ಮೆ
ಕೃಷ್ಣ ಎನ ಬಾರದೇ
ಕಂದನ ಬಿಗಿದಪ್ಪಿ
ಮುದ್ದಾಡುತಲೊಮ್ಮೆ
ಕೃಷ್ಣ ಎನ ಬಾರದೇ
ಭೋಗ ಪಡೆದು ಅನುರಾಗದಿಂದಿರುವಾಗ
ಕೃಷ್ಣ ಎನ ಬಾರದೇ

ಎಂಬುದು ಅವರ ಉಪದೇಶ.

ಸಾಧಾರಣವಾಗಿ ಭಕ್ತರಿಗೆ ಗೃಹಜೀವನ ಅನುಕೂಲವಾಗಿರುವುದಿಲ್ಲ. ಆದರೆ ಪುರಂದರ ದಾಸರು, ತ್ಯಾಗರಾಜರು, ಭದ್ರಾಚಲ ರಾಮದಾಸರು, ತಾಳ್ಲಪಾಕ ಅನ್ನಮಾಚಾರ್ಯರು ಮೊದಲಾದ ಕೀರ್ತನಕಾರರಿಗೆ ಮಾತ್ರ ಅಂತಹ ಭಾಗ್ಯವಿತ್ತು. ಆದ್ದರಿಂದ ಅವರು ತಮ್ಮ ಅನುಭವಗಳನ್ನು ಪದಗಳಲ್ಲಿ ಜೋಡಿಸಿದ್ದಾರೆ.

ದಾಸರ ಅನುಕೂಲಸತಿ ಸರಸ್ವತೀಬಾಯಿ. ಹಣವಿದ್ದ ಕಾಲದಲ್ಲಿ, ಬಡತನದಲ್ಲಿ ತನ್ನ ಪತಿಯನ್ನು ಸಮಾನವಾಗಿ ಸೇವಿಸಿದವಳು. ಆದ್ದರಿಂದ ದಾಸರು;

ಆ ಪತ್ನಿಯು ತಾ ಪ್ರೀತಿಯಿಂದಲಿ
ಗೋಪಾಳ ಬುಟ್ಟಿಯ ಹಿಡಿಸಿದಳಯ್ಯ

ಎಂದು ತಮ್ಮ ಸತೀಪ್ರೀತಿಯನ್ನು ಸ್ಮರಿಸಿದ್ದಾರೆ. ರಾಯರು ಹಾಕಿದ ರತ್ನಗಳನ್ನು ಹೊನ್ನುಗಳನ್ನು ತುಳಸಿ ಬೃಂದಾವನಕ್ಕೆ ಅಲಂಕರಿಸಿದವಳು. ಇದೇ ರೀತಿ ದಾಸರ ಮಕ್ಕಳು. ತಂದೆಯವರ ಮಾರ್ಗದಲ್ಲೆ, ನಡೆದಲ್ಲೆ. ನಡೆಯುತ್ತಾ ತಂದೆಯಿಂದ ಅಂಕಿತ ಪಡೆದು ದೇವರನಾಮಗಳನ್ನು ರಚಿಸಿದರು.

ಪುರಂದರದಾಸರು ತಮ್ಮ ಪದಗಳಲ್ಲಿ ಹೇಳಿರುವ ಸತೀಸುತರ ಪ್ರಸಂಗ ಮೂರು ಬಗೆಯಾಗಿದೆ. ಲೋಕದ ಅನುಭವವನ್ನು ಹಾಡುವ ಪದಗಳು.

ಸತ್ಯವಂತರಗಿದು ಕಾಲವಲ್ಲ
ದುಷ್ಟಜನರಿಗೆ ಸುಭಿಕ್ಷಕಾಲ
ಸ್ಥಿರವಾದ ಪತಿವ್ರತೆಯು
ಪರಮ ನಿಂದಿಪಕಾಲ
ಸತಿಸುತರು ಎಂಬುವರ
ನಂಬಲರಿಯದ ಕಾಲ
... ... ... ...
ತೇಲಿಸೋ ಇಲ್ಲ ಮುಳುಗಿಸೋ ನಿನ್ನ
ಕಾಲಿಗೆ ಬಿದ್ದನೋ ಪರಮ ಕೃಪಾಳೋ
ಸತಿಸುತ ಧನಧಾಸೆ ಎಂತಂಬ ಮೋಹದಿ
ಹಿತದಿಂದ ಅತಿನೊಂದು ಬೆಂಡಾದೆನೋ
... ... ... ...
ಒಡೆತನ ಬರುವಾಗ ತನ್ನ
ಪತಿಯನು ಕಂಡು
ಚೆಲ್ಲುವ ಚೆನ್ನಿಗನೆಂದು ಪೊಗಳುವರೋ
ಬಡತನವು ಬಂದು ತಾ ಕೂಡುವ
ವೇಳೆಯಲಿ
ಮುದಿಯನ ಕೈಪಿಡಿದು
ಕೆಟ್ಟೆನೆಂಬೋರೋ

ಜಗತ್ತಿನಲ್ಲಿ ಜನರ ನಡತೆಯನ್ನು ನೋಡಿ ಹೇಳಿದ ಪ್ರಸಂಗಗಳು ಎರಡನೆಯ ಪದ್ಧತಿ. ದಾಸರು ಜನರಿಗೆ ದೂರವಾಗಿರಲಿಲ್ಲ. ಸಾಮಾನ್ಯ ಜನರ ಪ್ರವೃತ್ತಿಯನ್ನು ಅರ್ಥ ಮಾಡಿಕೊಂಡು ಅವರಿಗೆ ಹಿತವನ್ನು ಬೋಧಿಸಿದವರು.

**ಡಾ॥ ಕೆ. ಸರ್ವೋತ್ತಮರಾವ್**



ಕೆಲವರಿಗೆ ಮದುವೆ ಆಗುವುದಿಲ್ಲ. ವಿವಾಹವಾದರೂ ಮಕ್ಕಳಾಗುವುದಿಲ್ಲ. ಲಗ್ನವಾದರೂ ಹೆಂಡತಿ ಅನುಕೂಲವಾಗಿರುವುದಿಲ್ಲ. ಅಂತಹ ಜನರನ್ನು

ಸತಿಯಿದ್ದರು ಚಿಂತೆ ಸತಿಯಿಲ್ಲದ ಚಿಂತೆ
ಮತಿಹೀನ ಸತಿಯಾದರು ಚಿಂತೆಯು
ಮಕ್ಕಳಿಲ್ಲದ ಚಿಂತೆ ಮಕ್ಕಳಾದರೂ
ಚಿಂತೆ

ಎಂದು ಹಾಡಿದ್ದಾರೆ.

ಕೆಲವರು ಸತಿಯರನ್ನು ತಲೆಯ ಮೇಲಿಟ್ಟುಕೊಳ್ಳುತ್ತಾರೆ. ಅವರ ಪ್ರವೃತ್ತಿಯನ್ನು ದಾಸರು ಹಾಡಿದ ಬಗೆ ನೋಡಿ.

ತಂದೆ ತಾಯಿ ತಿಂದು ತಿನಲು
ಒಂದು ದಿನ ಕೇಳಲಿಲ್ಲ
ಮಂದಗಮನೆಯರೊಡನೆ
ಆನಂದದಿಂದಲಿರುವರು
... ... ...
ಮಡದಿ ಮಾತನು ಕೇಳಿ
ನಡೆದು ಕೊಂಬುವನು ಭ್ರಷ್ಟ
... ... ...
ಮಡದಿಯ ನುಡಿ ಕೇಳಿ
ಒಡ ಹೊಟ್ಟದವರೊಡನೆ
ಹಡೆದ ತಾಯಿಯ ಕೂಡ
ಹಗೆ ಮಾಡದೆ

ಇದೇಪ್ರಕಾರ ಕಲಹಪ್ರಿಯುರಾದ ಹೆಂಡತಿ ಯುರನ್ನು ಕುರಿತು ಹಾಡಿದ ಪದ ಈ ಕಾಲಕ್ಕೂ ಸರಿಹೋಗುತ್ತದೆ.

ಹೆಂಡತಿ ಪ್ರಾಣ ಹಿಂಡುತಿ ದೊಡ್ಡ
ಕೊಂಡ ಕೋತಿಯಂತೆ ಕುಣಿಕುಣಿಸುತ್ತಿ
ಹೊತ್ತಾರೆ ಏಳುತ್ತಿ
ಹೊರಗೆ ತಿರುಗಾಡುತ್ತಿ
ಹೊತ್ತು ಹೋಯಿತು ಭತ್ಯ ತಾರೆನ್ನುತ್ತಿ
ಉತ್ತಮ ಗುರುಹಿರಿಯರ
ಮಾತು ಮೀರುತ್ತಿ
ಮೃತ್ಯು ದೇವತೆಯಂತೆ
ಮನೆಯೊಳಗಿರುತಿ

ಮತ್ತೂ ಕೆಲವು ಸೂಕ್ತಗಳು–

ಪತಿಯನು ನಿಂದಿಸಿ
ತೆಗಳುವ ಸತಿಯಳು
ವ್ರತಗಳ ಮಾಡಿದರೇನು ಫಲ
... ... ... ...
ವಾದಿಸುತ ಸತಿಸುತರು ಇದ್ದು ಫಲವೇನು
... ... ... ...
ಗಂಡನ ಬೈಯುವರಿಲ್ಲಿ ಯಮ
ದಂಡೆ ಹೊರಿಸುವರಲ್ಲಿ
... ... ... ...
ಮಸೆದು ಮತ್ಸರಿಸಿ
ಸತಿಯೊಡನೆ ಸಂಸಾರಕ್ಕಿಂತ
ಹಸನಿಲ್ಲದಾ ಹಾಳುಗುಡಿಯು ಲೇಸು
ಸತಿ ವಶನಾಗಿ ಜನನಿ ಜನಕರಿಗೆ
ಅತಿ ನಿಷ್ಠುರ ನುಡಿದವ ಹೊಲೆಯ

ಜನರಿಗೆ ಉಪದೇಶ ಮಾಡುವ ಅಧಿಕಾರ ಅರಸರಿಗೆ, ಗುರುಗಳಿಗೆ, ಹಿರಿಯರಿಗೆ ಉಂಟು. ಅರಸರು ಆಜ್ಞೆಯಿಂದ ಉಪ ದೇಶ ಮಾಡುತ್ತಾರೆ. ಗುರುಗಳು ಅಧಿಕಾರ ದಿಂದ ಹೇಳುತ್ತಾರೆ. ಹಿರಿಯರು ಹಿತವಾಗಿ ಹೇಳುತ್ತಾರೆ. ಪುರಂದರದಾಸರು ಹಿರಿಯರು. ಅವರ ಉಪದೇಶಗಳಲ್ಲಿ ಹಿತ ಉಂಟು. ಹಿತ ದಲ್ಲಿ ಅಧಿಕಾರವು ಉಂಟು. ಅಭ್ಯರ್ಥನೆ ಉಂಟು. ಜನರು ಹಾಳಾಗುತ್ತಾರೆನ್ನುವ ಆವೇದನೆ ಉಂಟು. ಇದೇ ಮೂರನೇ ವಿಧ.

ಅನ್ಯಸತಿಯರೊಲುಮೆ ಗೊಂಡು
ಅಧಮಗತಿಗೆ ಬೀಳಲೇಕೆ

(37 ನೇ ಪುಟ ನೋಡಿ)

# ದಾಸರು ಕಂಡಂತೆ




ಶ್ರೀ ಪುರಂದರದಾಸರು ಜಿಪುಣ ಶೀನಪ್ಪನಾಗಿದ್ದು, ದಾಸರಾಗಿ ಪರಿವರ್ತನೆಗೊಂಡಿದ್ದೇ ತಮ್ಮ ಹೆಂಡತಿಯಿಂದ. ಆದ್ದರಿಂದಲೇ ತಮ್ಮ ಮೊದಲ ಪದ್ಯ "ಆದದ್ದೆಲ್ಲ ಒಳಿತೇ ಆಯಿತು" ದಲ್ಲಿ ಹೆಂಡತಿ ಸಂತತಿ ಸಾವಿರ ವಾಗಲಿ ಎಂದು ಹಾರೈಸಿದ್ದಾರೆ.

ದಾಸರು ಕೃಷ್ಣನ ಬಗೆಗಿನ ಕೀರ್ತನೆಗಳನ್ನು ಹಾಡುವಾಗ ಸ್ವತಃ ತಾವೇ ಒಂದೆಡೆ ಯಶೋದೆಯಾದರೆ ಇನ್ನೊಂದೆಡೆಗೆ ಗೋಪಿಯರಾಗಿ ಕ್ರೀಡಿಸುತ್ತಾರೆ. "ಮನೆಯೊಳಗಾಡೋ ಗೋವಿಂದ" "ಪೋಗದಿರೆಲೋ ರಂಗಾ" ಮುಂತಾದ ಹಾಡುಗಳಲ್ಲಿ ದಾಸರ ಹೃದಯದಲ್ಲಿನ ಮಾತೃವಾತ್ಸಲ್ಯ ಮಡುಗಟ್ಟಿ ನಿಂತಿರುವುದನ್ನು ಅನುಭವಿಸಬಹುದು.

"ಅಮ್ಮಾ ನಿಮ್ಮ ಮನೆಗಳಲ್ಲಿ ನಮ್ಮ ಕೃಷ್ಣನ ಕಂಡಿರೇನಮ್ಮ" ಎಂಬ ಹಾಡಿನಲ್ಲಿ ಕಳೆದುಕೊಂಡ ಮಗವನ್ನು ಹುಡುಕುವ ಯಶೋದೆಯ ಹಂಬಲ ಶ್ರೋತೃಗಳ ಹೃದಯ ಮಿಡಿಯುವಂತೆ ಮಾಡುತ್ತದೆ.

ಸಮಾಜದಲ್ಲಿ ಸ್ತ್ರೀ ಹೇಗೆ ಬದುಕಬೇಕು ಎಂಬುದು ದಾಸರ ಪದ್ಯ "ತಂಗಿಗ್ಹೇಳಿದ ಕೃಷ್ಣ ಚಂದದಲಿ ಬುದ್ಧಿ" ಯಿಂದ ತಿಳಿಯುತ್ತದೆ. ಈ ಪದ್ಯದಲ್ಲಿ ಶ್ರೀಕೃಷ್ಣನು ಸುಭದ್ರೆಗೆ ಉಪದೇಶಿಸುವಂತೆ ಹಾಡನ್ನು ರಚಿಸಿ, ದಾಸರು ಸಮಸ್ತ ಸ್ತ್ರೀ ಕುಲಕ್ಕೆ ಮಹೋನ್ನತ ಉಪಕಾರ ಮಾಡಿದ್ದಾರೆ. ಜೊತೆಯವರ ಕೂಡ ನೀರು ತರುವಾಗ ವಾರೆಗಣ್ಣಲಿ ನೋಡದಿರು, ಪರರ ಒಡವೆಯ ಕಂಡು ಆಸೆ ಪಡದಿರು, ಅತಿಯಾಗಿ ಮಾತಾಡದೆ ಲೋಕದೊಳು ಮೂಕಿಯೆನಿಸು ಮುಂತಾಗಿ ಈ ಹಾಡಿನ ಮೂಲಕ ತಿಳಿಸಿ ಹೇಳಿದ್ದಾರೆ.

ಇಷ್ಟೇ ಅಲ್ಲ "ಸ್ತ್ರೀ"ಯ ಇನ್ನೊಂದು ಮುಖದ ಪರಿಚಯವನ್ನೂ ದಾಸರು ಮಾಡಿಸುತ್ತಾರೆ. "ಸುಜ್ಞಾನಿಯಿಂದಾಳಬೇಕಣ್ಣ" ಎಂಬ ರಚನೆಯಲ್ಲಿ ಕೆಟ್ಟ ಸ್ತ್ರೀಯರ ಸ್ವಭಾವ ಹೇಗಿರುತ್ತದೆ ಎಂದು ವಿವರಿದ್ದಾರೆ.

ತಾವು ಭಿಕ್ಷೆಗಾಗಿ ಮನೆಮನೆಗೆ ಹೋದಾಗ ಒಂದು ಹಿಡಿ ಭಿಕ್ಷೆಯನ್ನು ಸಹ ಹಾಕಲು ಒಬ್ಬ ಮಹಿಳೆಗೆ ಎಷ್ಟು ಅಡ್ಡಿ ಆತಂಕಗಳಿರುತ್ತವೆ ಎನ್ನುವುದನ್ನು ಅವರ ಪದ್ಯ "ಇಕ್ಕಲಾರೆ ಕೈ ಎಂಜಲು" ಮೂಲಕ ತಿಳಿಸಿಕೊಟ್ಟಿದ್ದಾರೆ. ಅಳುವ ಚಿಕ್ಕಮಕ್ಕಳು, ಮಡಕೆ ತೊಳೆಯುವಂತಹ ಮನೆಗೆಲಸ, ಮುಂತಾದ ಅನೇಕ ಸಮಸ್ಯೆಗಳಿರುತ್ತವೆ ಎಂಬುದನ್ನು "ಅಟ್ಟದ ಮೇಲೆ ಅಕ್ಕಿ ತೆಗೆಯಬೇಕು, ಹೊಟ್ಟೆ ನೋಯುತಲಿದೆ, ಮುಟ್ಟಾಗಿ ಇದ್ದೇನೆ, ಮನೆಯೊಳಗಾರಿಲ್ಲ, ವೀಸದ ಕಾಸಿಗೆ ದವಸವ ನಾ ತಂದೆ ಕೊನೆಗೂ ಸಾಲದು" ಇತ್ಯಾದಿ ಉದಾಹರಣೆಗಳನ್ನು ಕೊಟ್ಟು ವಿವರಿಸಿದ್ದಾರೆ. ತ್ರಿಕಾಲಜ್ಞಾನಿಯಾದ ನಾರದಾವತಾರಿ ದಾಸರಿಗೆ ಸ್ತ್ರೀಯರ ಸಮಸ್ಯೆಗಳು ಅರಿವಾಗದೆ!

—ಶ್ರೀಮತಿ ಪರಿಮಳ

## ಗ್ರಂಥಾಂತರಂಗ

# ಸಪ್ತಕೃತಿಗಳ ಸವಿವರ ವ್ಯಾಖ್ಯಾನ
# ಪುರಂದರೋಪನಿಷತ್

ಪುರಂದರದಾಸರು ಹರಿದಾಸರಲ್ಲಿ ಹಿರಿಯರು. ಕನ್ನಡದಲ್ಲಿ ಪದ ಹೇಳಿ ತತ್ತ್ವವನ್ನೂ, ಸಾಮಾಜಿಕ ಹಿತವನ್ನೂ ಸಾಧಿಸಲು ಪ್ರಯತ್ನಿಸಿದವರು. ಅವರ ಕೀರ್ತನೆಗಳನ್ನು ಪುರಂದರೋಪನಿಷತ್ ಎಂದೇ ಕರೆಯುವುದು ವಾಡಿಕೆ. ಅವರು ಲೋಕಸಂಚಾರಿ, ಹಲವಾರು ದಿವ್ಯಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಲ್ಲಿನ ದೇವರುಗಳ ಬಗ್ಗೆ ಕೃತಿಗಳನ್ನು ರಚಿಸಿದರು. ಅವರಿಗೆ ತಿರುಮಲೆಯಪ್ಪನೆಂದರೆ ಒಂದಷ್ಟು ಹೆಚ್ಚಿನ ಅಭಿಮಾನ. ಆ ಭಕ್ತಿ, ಆ ಅಭಿಮಾನಗಳಿಂದಲೇ ಶ್ರೀನಿವಾಸನನ್ನು ಕುರಿತ ಅವರು ಅಸಂಖ್ಯವಾದ ಪದಗಳನ್ನು ಹಾಡಿದರು. ಇಂತಹ ಕೃತಿಗಳಲ್ಲಿ ಕೆಲವನ್ನು ಆಯ್ದು ಶ್ರೀನಿವಾಸನ ಹಾಡುಗಳು ಭಾಗ-1 ರಲ್ಲಿ ತಿ.ತಿ.ದೇ. ದಾಸಸಾಹಿತ್ಯ ಪ್ರಾಜೆಕ್ಟ್ ಪ್ರಕಟಿಸಿದೆ. ಅದರಲ್ಲಿನ ಏಳು ಹಾಡುಗಳಿಗೆ ಕನ್ನಡದ ಖ್ಯಾತ ವಿದ್ವಾಂಸರಾದ ಶ್ರೀ ಬನ್ನಂಜೆ ಗೋವಿಂದಾಚಾರ್ಯರು ವಿಸ್ತೃತ ಪಡಿಸಿರುವ ವ್ಯಾಖ್ಯಾನವೇ 'ಪುರಂದರೋಪನಿಷತ್'.

ಪುರಂದರದಾಸರ ಹಾಡುಗಳು ಸರಳ ಸುಂದರ ಎಂದು ಮೇಲುನೋಟಕ್ಕೆ ಅನ್ನಿಸುವುದು ಸಹಜ, ಎಂತಲೇ ಅದು ನಾಡಿನ ಮೂಲೆ ಮೂಲೆಯುಲ್ಲೂ ಪಂಡಿತ ಪಾಮರರೆಲ್ಲರಿಗೂ ಪರಿಚಿತವಾಗಿ ದೈನಂದಿನ ಬದುಕಿನ ಅಂಗವಾಗಿ, ಆನಂದ, ದುಃಖ, ಭಕ್ತಿ, ಭಗವತ್ಪ್ರೇಮಗಳ ಅಭಿವ್ಯಕ್ತಿಯ ಸಾಂಕೇತಿಕ ಪ್ರತೀಕಗಳಾಗಿ ಬಳಕೆಯಾಗುತ್ತವೆ. ಆದರೆ ಅವು ಸರಳ ಮಾತ್ರವೇ ಅಲ್ಲ ತುಂಬ ವಿಶಾಲವೂ ಆಳವೂ ಆದ ತಾತ್ತ್ವಿಕ ನೆಲಗಟ್ಟಿನಿಂದಲೂ ಕೂಡಿದವು; ಎಂಬುದೇ ಅಲ್ಲಿನ ವಿಶೇಷ. ಅದನ್ನೇ ವಿವರಿಸುವ ಒಂದು ಪ್ರಯತ್ನವನ್ನು ವ್ಯಾಖ್ಯಾನಕಾರ ಶ್ರೀ ಬನ್ನಂಜೆ ಗೋವಿಂದಾಚಾರ್ಯರು ಕೈಗೊಂಡಿದ್ದಾರೆ.

ಪುರಂದರೋಪನಿಷತ್ ಕೃತಿಯಲ್ಲಿ ವ್ಯಾಖ್ಯಾನಿತವಾಗಿರುವ ಏಳುಕೃತಿಗಳೆಂದರೆ; ಎರಡು ಸುಪ್ರಭಾತ ಕೃತಿಗಳು:- 'ಏಳಯ್ಯ ಬೆಳಗಾಯಿತು', (ವೆಂಕಟೇಶ್ವರಸ್ವಾಮಿ ಸುಪ್ರಭಾತ) 'ಏಳಯ್ಯ ಬೆಳಗಾಯಿತು' (ದಶಾವತಾರಸುಪ್ರಭಾತ) ಭಗವಂತನಿಗೆ ಸ್ವಾಗತ ಕೋರುವ – 'ಬಾರಯ್ಯ ವೆಂಕಟರಮಣ ಭಕ್ತರನಿಧಿಯೆ', 'ಒಳಮನೆಗೆ ಬಾರಯ್ಯ', 'ವೇಣುನಾದ ಬಾರೋ ವೆಂಕಟರಮಣನೆ ಬಾರೋ', ವಾತ್ಸಲ್ಯಭಾವದ 'ಮುದ್ದು ಕೊಡುವೆನು ಬಾರೊ', ಅಭಯ ಪ್ರಾರ್ಥನೆಯ 'ವೆಂಕಟೇಶ ದಯಮಾಡೋ ವೇದವೇದ್ಯನೆ.'

ನೂರ ಅರವತ್ತು ಪುಟಗಳಲ್ಲಿ ಹರಿದಿರುವ ಈ ಏಳುಕೃತಿಗಳ ವ್ಯಾಖ್ಯಾನ ನಿಜಕ್ಕೂ ಮನನೀಯವಾಗಿದೆ. ಪುರಂದರ ದಾಸರ ಮಾತಿನ ಹಿನ್ನೆಲೆಯನ್ನು, ಮಾತಿನ ಹಲವು ಹನ್ನೊಂದು ಧಾಟಿ, ಧೋರಣೆಗಳನ್ನು ಅವರಲ್ಲಿ ಅಡಗಿದ ಅರ್ಥಗರ್ಭವನ್ನು, ಸರ್ವರಿಗೂ ತಿಳಿಯುವಂತೆ ವಿವರಿಸಲಾಗಿದೆ. ಇದರೊಂದಿಗೆ ವೇದಗಳು ಪುರಾಣಗಳು, ಪ್ರಸ್ಥಾನ ತ್ರಯ, ರಾಮಾಯಣ, ಭಾರತಗಳು ಆಚಾರ್ಯ ಪುರುಷರ ಕೃತಿಗಳನ್ನೂ ಕವಿವಾಕ್ಕಿನ ಸಮರ್ಥನೆಗಾಗಿ ಸಮಂಜಸವಾಗಿ ಉದ್ಧರಿಸಲಾಗಿದೆ. ಒಟ್ಟಿನಲ್ಲಿ ಉಪನಿಷದ್ಭಾವದಾರೆ ಪುರಂದರ ದಾಸರ ಕೃತಿಗಳಲ್ಲಿ ಹೇಗೆ ಓತಪ್ರೋತವಾಗಿ ಹರಿದಿದೆ ಎಂಬುದನ್ನು ಉದ್ದಕ್ಕೂ ಸ್ಪಷ್ಟಪಡಿಸುತ್ತಲೇ ನಡೆಯಲಾಗಿದೆ. ತನ್ಮೂಲಕವೇ ಪುರಂದರ ದಾಸರ ಕೃತಿಗಳು ಕನ್ನಡದಲ್ಲಿ ಪಡಿಮೂಡಿದ ಉಪನಿಷತ್ತುಗಳೆಂಬುದನ್ನು ನಿರೂಪಿಸುತ್ತ ನಡೆಯಲಾಗಿದೆ. ಪುರಂದರದಾಸರಲ್ಲಿ ಪ್ರಬಲವಾಗಿದ್ದ ಜೀವನಾಸಕ್ತಿ ಹಾಗೂ ಆಧ್ಯಾತ್ಮಿಕ ತುಡಿತಗಳನ್ನು, ಇದ್ದೂ ಇಲ್ಲದಂತಾಗುವಿಕೆಯನ್ನು, ಈಸಿ ಜೈಸುವಿಕೆಯನ್ನು ವಿವರಿಸಲಾಗಿದೆ. ಪುರಂದರದಾಸರು ನೀಡಿದ ಮಾನವೀಯ ಮೌಲ್ಯಗಳಿಗೆ ಒತ್ತು ಹಾಕುತ್ತ ಸಾಗಿರುವ ಕೃತಿ ಭಕ್ತಜನಕ್ಕೆಲ್ಲ ಆದರಣೀಯವಾಗುವುದರಲ್ಲಿ ಸಂದೇಹವಿಲ್ಲ.

'ಪುರಂದರೋಪನಿಷತ್' ಕನ್ನಡ ಕೃತಿಯು ತೆಲುಗಿನಲ್ಲೂ ಅನುವಾದವಾಗಿದೆ. ಅದೇ ಹೆಸರಿನ ಈ ಕೃತಿ 190 ಪುಟಗಳಲ್ಲಿ ಹರಿದಿದ್ದು, ಕನ್ನಡದ ಈ ಏಳು ಕೃತಿಗಳನ್ನೂ ತೆಲುಗು ಲಿಪಿಯಲ್ಲಿ ಮುದ್ರಿಸಿ ತೆಲುಗು ಭಾವಾರ್ಥವನ್ನು ನೀಡಿ ನಂತರ ಶ್ರೀ ಬನ್ನಂಜೆಯವರ ವ್ಯಾಖ್ಯಾನವನ್ನು ತೆಲುಗಿನಲ್ಲಿ ನೀಡಲಾಗಿದೆ. ಈ ಅನುವಾದ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದವರು ತೆಲುಗಿನಲ್ಲಿ ಹಲವಾರು ಸ್ವತಂತ್ರ, ಅನುವಾದಕೃತಿಗಳನ್ನು ಪ್ರಕಟಿಸಿರುವ ದಾಸಸಾಹಿತ್ಯ ಪ್ರಾಜೆಕ್ಟಿನ ಶ್ರೀ ವಕ್ಕಂತಂಸೂರ್ಯನಾರಾಯಣರಾವ್ ಅವರು.

ಎರಡೂ ಪುಸ್ತಕಗಳ ಸಂಪಾದಕರು ದಾಸಸಾಹಿತ್ಯ ಪ್ರಾಜೆಕ್ಟಿನ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾರ್ಯ. ಕನ್ನಡ, ತೆಲುಗು ಬಲ್ಲವರು ಈ ಪುಸ್ತಕಗಳನ್ನು ಓದಿ ಪ್ರಯೋಜನವನ್ನು ಪಡೆಯಬೇಕೆಂದು ಆಶಿಸಲಾಗಿದೆ.

---

ಪುರಂದರೋಪನಿಷತ್ :

ಕನ್ನಡ–ಬೆಲೆ ರೂ 8-00
ತೆಲುಗು–ಬೆಲೆ ರೂ 9-00

ಪುಸ್ತಕಗಳಿಗಾಗಿ: ವೆಲ್‌ಫೇರ್ ಆಫೀಸರ್,
ತಿ.ತಿ.ದೇ., ತಿರುಪತಿ.
ಅಂಚೆವೆಚ್ಚ ಪ್ರತ್ಯೇಕ.

## ಪುಸ್ತಕವಿಮರ್ಶೆ

**ದಾಸಮಾನಸ:** ಶ್ರೀ ಪುರಂದರದಾಸರ 500 ನೇ ಹುಟ್ಟುಹಬ್ಬದ ಸ್ಮರಣ ಸಂಚಿಕೆ.

ಪುಟಗಳು: 126+10+22

ಪ್ರತಿಗಳಿಗಾಗಿ: ಕೀರ್ತನಕಾರರ ಸಮ್ಮೇಳನ ಸಮಿತಿ
ಹಾದಿಗಲ್ಲು, ಶಿವಮೊಗ್ಗ.

---

ದಾಸಸಾಹಿತ್ಯದ ಪರಿಚಯವನ್ನು ಪಂಡಿತ ಪಾಮರರಿಬ್ಬರಿಗೂ ಮಾಡಿಕೊಡುವಲ್ಲಿ ಮೂಡಿಬಂದಿರುವ 'ದಾಸ ಮಾನಸ' ಪುಸ್ತಕವು ಅನೇಕ ಉಪಯುಕ್ತ ವಿಷಯಗಳನ್ನು ಒಳಗೊಂಡಿದೆ. ಪ್ರಾರಂಭಕ್ಕೆ ನರಹರಿ ತೀರ್ಥ, ವ್ಯಾಸರಾಯರು, ವಾದಿರಾಜರು, ಮಹಿಪತಿದಾಸರು, ಕನಕದಾಸರು, ಹೆಳವನಕಟ್ಟೆ ಗಿರಿಯಮ್ಮ, ಪುರಂದರದಾಸರು, ರಾಘವೇಂದ್ರ ತೀರ್ಥರು, ಗೋಪಾಲದಾಸರು, ವ್ಯಾಸತತ್ತ್ವಜ್ಞರು, ಪ್ರಸನ್ನ ವೆಂಕಟದಾಸರು ಇವರ ಒಂದೊಂದು ಸುಂದರ ಕೀರ್ತನೆಗಳನ್ನು ಕೊಡಲಾಗಿದೆ. ಜೊತೆಗೇ ಪುಸ್ತಕದಲ್ಲಿ ಶಿವರಾಮು, ಜಿ. ಪಿ. ಕೆ, ವಿ.ಜಿ. ಕುಲಕರ್ಣಿ, ಡಾ॥ ಎ. ಎಸ್. ವೇಣುಗೋಪಾಲರಾವ್, ಶ್ರೀನಿವಾಸ ಉಡುಪ ಬಿ. ಎಲ್. ಎಸ್. ಆಡಿಗ, ಶ್ರೀ ಲಕ್ಷ್ಮೀ ಮುಂತಾದ ಖ್ಯಾತ ಕವಿಗಳು ಬರೆದ ಕವನಗಳನ್ನು ಕೊನೆಗೆ ಕೊಡಲಾಗಿದೆ.

ಹಾಲನಾ ಅವರು 'ಹರಿದಾಸ ಸಾಹಿತ್ಯ ಪರಂಪರೆಯ ಬೆಳವಣಿಗೆ' ಎಂಬ ಲೇಖನದಲ್ಲಿ ಕನ್ನಡ ಸಾಹಿತ್ಯದ ಸಂಕ್ರಮಣ ಕಾಲ, ವಚನಕಾರರ ವಿಷಯ ಮೊದಲಾದುವನ್ನು ಪ್ರಸ್ತಾಪಿಸಿ ಕೆಲವು ಪ್ರಮುಖ ದಾಸರ ಸಂಕ್ಷಿಪ್ತ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ದಾಸಸಾಹಿತ್ಯದ ಸಾಮಾನ್ಯ ಸ್ವರೂಪ ಲೇಖನದಲ್ಲಿ ಡಾ॥ ಮುಗಳಿಯವರು ಪಾಂಡಿತ್ಯ ಪೂರ್ಣವಾಗಿ ಹಂತ, ಹಂತವಾಗಿ ದಾಸಸಾಹಿತ್ಯದ ಸಾಮಾನ್ಯ ಸ್ವರೂಪವನ್ನು ಬಿಡಿಸಿಕೊಟ್ಟಿದ್ದಾರೆ. ದಾಸಸಾಹಿತ್ಯ ಕೀರ್ತನೆ, ಸುಳಾದಿ, ಉಗಾಭೋಗ– ಈ ಮುಖ್ಯ ರೂಪಗಳಲ್ಲಿದೆ ಎಂದು ಅವನ್ನು ವಿಶ್ಲೇಷಿಸಿದ್ದಾರೆ.

ಪುರಂದರದಾಸರು ಕನ್ನಡಕ್ಕೆ ನೀಡಿದ ಕೊಡುಗೆ ಲೇಖನವನ್ನು ಎಸ್. ಎಸ್. ಹರಿದಾಸ್ ಅವರು ಸಂಕ್ಷಿಪ್ತವಾಗಿ ಕೊಟ್ಟಿದ್ದಾರೆ ಸಂಗೀತ ಶಾಸ್ತ್ರಕ್ಕೆ ಬುನಾದಿ ಹಾಕಿದ ಪುರಂದರದಾಸರ ಪರಿಚಯ ಈ ಲೇಖನದಲ್ಲಿದೆ. ಇದೇ ರೀತಿಯ ಮತ್ತೊಂದು ಸಂಕ್ಷಿಪ್ತ ಲೇಖನ ಲ. ರಂಗನಾಥರಾವ್‌ರವರ 'ಅಪರೋಕ್ಷಾನುಭೂತಿ ಸಂತರಿಬ್ಬರ ದೃಷ್ಟಿಯಲ್ಲಿ,' ಆಗಿದೆ. ಇದು ಚಿಕ್ಕದಾದರೂ ಚೊಕ್ಕವಾಗಿದೆ. ಗೋರೂರು ರಾಮಸ್ವಾಮಿ ಅಯ್ಯಂಗಾರ್‌ರವರು 'ದಾಸಸಾಹಿತ್ಯವನ್ನು ಉಳಿಸ ಬೇಕಾಗಿರುವ ಸನ್ನಿವೇಶ'ವನ್ನು ಚಿಕ್ಕ ಲೇಖನದಲ್ಲಿ ಪ್ರಕಟಿಸಿದ್ದಾರೆ. ಹರಿದಾಸ ಸಾಹಿತ್ಯವು ಬದುಕಿನ ಓರೆ–ಕೋರೆಗಳನ್ನು ತಿದ್ದಿ ಬದುಕನ್ನು ಒಪ್ಪವಾಗಿಡಲು ಸಾಕಷ್ಟು ಪ್ರೇರಣೆಯನ್ನು ನೀಡಿದೆ. ಇದರಲ್ಲಿ ಬರುವ ಪುರಾಣದ ಹೋಲಿಕೆ ಪ್ರತಿಮೆ–ಪ್ರತೀಕಗಳು ಇವತ್ತಿನ ದೃಷ್ಟಿಯಿಂದ ಒಂದು ನಿರ್ದಿಷ್ಟ ಸಮುದಾಯಕ್ಕೆ ಮಾತ್ರ ತಮ್ಮ ಅರ್ಥವನ್ನು ಸೀಮಿತಗೊಳಿಸುತ್ತದೆಯಾದರೂ ಕೆಲವು ಮಾತ್ರ ಜಾಗತಿಕ ವ್ಯಾಪ್ತಿಯನ್ನು ಹೊಂದಬಲ್ಲವು – ಎಂದು ಹೇಳುತ್ತಾ ಎಂ. ರಾಜಗೋಪಾಲಾಚಾರ್ಯ ಅವರು ಸಮಾಜ ಜಾಗೃತಿಯಲ್ಲಿ ದಾಸಸಾಹಿತ್ಯ -ಲೇಖನವನ್ನು ಬರೆದಿದ್ದಾರೆ. ದಾಸರು ಸಮಾಜದ ಡಂಭಾಚಾರಗಳನ್ನೂ, ಮೂಢನಂಬಿಕೆಗಳನ್ನೂ ಪ್ರಬಲವಾಗಿ ಖಂಡಿಸಿದ ವಿಚಾರ ಅವರ ಅನೇಕ ಕೀರ್ತನೆಗಳಲ್ಲಿ ದೊರುಕುತ್ತದೆ.

ದಾಸವರೇಣ್ಯರಲ್ಲಿ ಪ್ರಮುಖರಾದ ಪುರಂದರ ದಾಸ, ಹಾಗು ಕನಕದಾಸರನ್ನು ಕುರಿತಂತೆ ತಲಾ ಎರಡೆರಡು ಪಾಂಡಿತ್ಯ ಪೂರ್ಣಲೇಖನಗಳನ್ನು ಪ್ರಸಿದ್ಧ ವಿದ್ವಾಂಸರುಗಳು ಬರೆದಿದ್ದಾರೆ. ಪುರಂದರದಾಸರ ಜೀವನ ಮತ್ತು ಸಂದೇಶ ಲೇಖನದಲ್ಲಿ ಬ. ನ. ರಘುರಾಮರು ಶ್ರಮದಿಂದ ಪುರಂದರರ ಬಗೆಗಿನ ವಿವರಗಳನ್ನು ಸಂಗ್ರಹಿಸಿ ಕೊಟ್ಟಿದ್ದಾರೆ, ಪುರಂದರದಾಸರು ಮನುಜಶರೀರವಿದೇನು ಸುಖ, ಹಿಗ್ಗುವಿಯಾಕೊ ಈ ದೇಹಕೆ, ಎಂದು ಉದ್ಗಾರವೆತ್ತಿದರೂ ಮಾನವ ಜನ್ಮ ದೊಡ್ಡದು ಎಂದು ಹೇಳಿ ಅದರ ಹಿರಿಮೆಯನ್ನು ಹೊಗಳಿರುವರು' ಹೀಗೆ ಆರು ಹಿತವರು ನಿನಗೆ ಈ ಮೂವರೊಳಗೆ ನಾರಿಯೊ, ಧಾರುಣಿಯೊ ಬಲು ಧನದಸಿರಿಯೊ ಎಂದು ಪ್ರಶ್ನಿಸಿ ಅವುಗಳ ಮಾಯೆಯೆಂತಹುದೆನ್ನುವುದನ್ನು ಸ್ಪಷ್ಟಪಡಿಸಿರುವರು ಎಂದು ಪುರಂದರದಾಸರ ಜೀವನ ದೃಷ್ಟಿಯನ್ನು ಅದೇ ಹೆಸರಿನ ಲೇಖನದಲ್ಲಿ ಡಾ॥ ಜಿ. ವರದರಾಜರಾವ್ ಅವರು ವಿವರಿಸಿದ್ದಾರೆ. ಡಾ॥ ಬಿ. ಶಿವಮೂರ್ತಿಶಾಸ್ತ್ರಿಗಳ ಲೇಖನ 'ಕನಕದಾಸರು ಅನುಭಾವ ದೃಷ್ಟಿಯಲ್ಲಿ'. ಲೇಖಕರು 'ಕನಕದಾಸರ ಹಲವಾರು ಕೀರ್ತನೆಗಳ ಪಂಕ್ತಿಗಳನ್ನಾರಿಸಿ ಉದಾಹರಣೆಯಾಗಿ ಕೊಟ್ಟು, ಅದರಲ್ಲಿನ ಅನುಭಾವವನ್ನು ತಿಳಿಸುವ ಪ್ರಯತ್ನ ಮಾಡಿದ್ದಾರೆ.

ಡಾ॥ ಜಿ. ಎಸ್. ಶಿವರುದ್ರಪ್ಪನವರು 'ಕನಕದಾಸರ ವಿಶಿಷ್ಟತೆ' ಎಂಬ ಲೇಖನ ಬರೆಯುತ್ತಾ ಕನಕರ ವೈಶಿಷ್ಟ್ಯವನ್ನು ಸಾರಿದ್ದಾರೆ. ಅವರ ವ್ಯಕ್ತಿತ್ವ (ಕನಕದಾಸರ) ಪರಂಪರೆಯ ಭಕ್ತಿಪ್ರಜ್ಞೆಗೆ ಒಳಗಾದರೂ ಅವರ ಭಕ್ತಿಭಾವ ಕಾವ್ಯಪ್ರಜ್ಞೆಗೆ ಮೂಲಭಿತ್ತಿಯಾಗಿ ಪರಿಣಮಿಸಿತು. ಆದಕಾರಣವೇ ಅವರು ಕೇವಲ ಕೀರ್ತನಕಾರರಾಗಿ ಮಾತ್ರವಲ್ಲದೆ ಕನ್ನಡದ ಕವಿಗಳ ಸಾಲಿನಲ್ಲಿಯೂ ನಿಲ್ಲಬಲ್ಲವರಾಗಿದ್ದಾರೆ, ಎಂಬ ಲೇಖನದ ಪ್ರಾರಂಭದ ಮಾತುಗಳು ಪಾಂಡಿತ್ಯ ಪೂರ್ಣವಾಗಿದ್ದು ಇದೇ ಲೇಖನದ ಧೋರಣೆಯನ್ನೂ ಎತ್ತಿ ಹಿಡಿಯುತ್ತದೆ.

ಸೂರದಾಸರ ಹಾಗೂ ಪುರಂದರದಾಸರ ಪದ್ಯಗಳ ವಾತ್ಸಲ್ಯಭಾವನೆಗಳನ್ನು ತೌಲನಿಕವಾಗಿ ಅಧ್ಯಯನ ಮಾಡುವ ಪ್ರಯತ್ನವನ್ನು ಎಂ. ವಿ. ಶರ್ಮರವರು 'ಹರಿದಾಸವರ್ಯ ಸೂರ ಪುರಂದರರ ವಾತ್ಸಲ್ಯಪಥ' ಎಂಬ ಲೇಖನದಲ್ಲಿ ಮಾಡಿದ್ದಾರೆ–ದಯಾನಂದ ಶಾನಭಾಗರ ನಾಮಸ್ಮರಣೆಯ ಮಹಿಮೆ, ಶಂಕರೇಶ್ವರಭಟ್ಟರ ಹಿಂದಿಯಲ್ಲಿ ಸಂತ ಸಾಹಿತ್ಯ, ಅಚ್ಯುತದಾಸರ ಹರಿಕಥೆ ಮತ್ತು ಹಿಂದೂ ಸಂಘಟನೆ, ವಿ. ಜಿ. ಕುಲಕರ್ಣಿಯವರ ಪುರಂದರದಾಸರ ಕೀರ್ತನೆಗಳು ಬೋಧಿಸುವ ಜೀವನ ಮಾರ್ಗ–ಒಂದು ವಿವೇಚನೆ, ಹೊಸೆ ಶೇಷಾದ್ರಿಯವರ ಭಾರತಿಯ ಪದತಲದಿಂದ, ಡಾ॥ ಟ. ವಿ. ವೆಂಕಟಾಚಲಶಾಸ್ತ್ರಿಯವರ – ವೈಷ್ಣವ ಪುರಾಣಗಳು ಕನ್ನಡ ಸಾಹಿತ್ಯ ಸಮೀಕ್ಷೆ–ಈ ಲೇಖನಗಳು ನೇರವಾಗಿ ಆಯಾ ವಿಷಯಗಳನ್ನು ಸಮಗ್ರವಾಗಿ, ವಿವರಣೆಗಳಿಂದ ಕೂಡಿಕೊಂಡು ಪರಿಚಯ ಮಾಡಿಕೊಡುತ್ತವೆ. ಈ ಪುಸ್ತಕದ ಕೊನೆಗೆ ಹಾದಿಗಲ್ಲಿನ ಕೀರ್ತನಕಾರರ ಸಮ್ಮೇಳನ–ಸಂಕಲ್ಪ–ಸಾಧನೆ ಸಿದ್ಧಿಗಳನ್ನು ಕುರಿತು ಸಂಕ್ಷಿಪ್ತವಾಗಿ ಪರಿಚಯ ಮಾಡಿಕೊಡಲಾಗಿದೆ.

ಒಟ್ಟಾರೆಯಾಗಿ ಹೇಳಬೇಕೆಂದರೆ 'ದಾಸ ಮಾನಸ' ಸ್ಮರಣ ಸಂಚಿಕೆಯು ದಾಸಸಾಹಿತ್ಯದ ಬಗೆಗೆ ಸಂಶೋಧನೆ ಮಾಡುತ್ತಿರುವವರಿಗೆ ಬಹಳ ಉಪಯುಕ್ತ ಮಾಹಿತಿಗಳನ್ನು ನೀಡುವಂತಹುದಾಗಿದೆ. ಸಂಪಾದಕರು ಬಹು ಶ್ರಮಪಟ್ಟು ವಿದ್ವಾಂಸರಿಂದ ಉತ್ತಮ ಪಾಂಡಿತ್ಯ ಪೂರ್ಣ ಲೇಖನಗಳನ್ನು ಬರೆಸಿ ಈ ಸ್ಮರಣ ಸಂಚಿಕೆಯಲ್ಲಿ ಪ್ರಕಟಿಸಿದ್ದಾರೆ. ಎಷ್ಟೇ ಒಳ್ಳೆ ವಿಷಯಗಳಿದ್ದರೂ ಸುಂದರ ಮುಖಚಿತ್ರ ಹಾಗು ಉತ್ತಮ ರಕ್ಷಾಪುಟಗಳಿಲ್ಲದೆ ಪುಸ್ತಕ ಕಂಗೊಳಿಸಲಾರದು ಆದರೂ ಇಂತಹ ಸಂಗ್ರಹವನ್ನು ತಂದಿರುವುದು ಈ ಸಂಪಾದಕಮಂಡಳಿಯ ಸ್ತುತ್ಯ ಪ್ರಯತ್ನವೇ ಆಗಿದೆ.

**–ಕೆ. ರಮಾನಂದ**

# ಕೂರತ್ತಾಳ್ವಾರ ಭಕ್ತ ತತ್ತ್ವ

ಶ್ರೀ ರಾಮಾನುಜಾಚಾರ್ಯರಿಗೆ ಕೂರೇಶರು ಅತ್ಯಂತ ನಿಷ್ಠಾವಂತರಾದ ಮತ್ತು ಪರಮ ಭಕ್ತರಾದ ಶಿಷ್ಯರಲ್ಲಿ ಒಬ್ಬರಾಗಿದ್ದರು. ಅವರ ಸಹಕಾರವಿಲ್ಲದಿದ್ದರೆ ರಾಮಾನುಜಾಚಾರ್ಯರು ತಮ್ಮ ಅಮೋಘವಾದಂತಹ ಕೃತಿ "ಶ್ರೀಭಾಷ್ಯ"ವನ್ನು ಬರೆಯಲಾಗುತ್ತಿರಲಿಲ್ಲವೆನ್ನಬಹುದು. ಕೂರೇಶರು ಏಕಸಂಧಿಗ್ರಾಹಿಗಳು. ಕೂರೇಶರು ತಮ್ಮ ಅದ್ಭುತವಾದ ಜ್ಞಾಪಕಶಕ್ತಿಗೆ ಪ್ರಸಿದ್ಧರಾಗಿದ್ದರು. ಇವರು ದೇವರಲ್ಲಿ ಅನನ್ಯ ಭಕ್ತಿ ವೈರಾಗ್ಯವನ್ನು ಹೊಂದಿದ್ದರು.

ಇವರು ತೈಮಾಸ ಹಸ್ತ ನಕ್ಷತ್ರದಲ್ಲಿ ಅವತರಿಸಿದರು 'ಶ್ರೀವತ್ಸ ಚಿಹ್ನ ಮಿಶ್ರೇಭ್ಯಃ' ಎಂದರೆ ಇವರು ವಿಷ್ಣುವಿನ ಶ್ರೀವತ್ಸ ಅವತಾರ. ಇವರು 'ಕೂರರ್ವ' ಎಂಬುವ ಊರಿಗೆ ರಾಜರಾಗಿದ್ದರು. ಇವರು ತಮ್ಮ ದೊರೆತನವನ್ನು ಬಿಟ್ಟು, ರಾಮಾನುಜಾಚಾರ್ಯರ ಪಟ್ಟ ಶಿಷ್ಯರಾದರು, ನಂತರ ಇವರು 'ಉಂಛವೃತ್ತಿ' (ಭಿಕ್ಷಾಟನೆ)ಯಿಂದ ತಮ್ಮ ಜೀವನ ನಡೆಸುತ್ತಿದ್ದರು.

ಇವರ ಜೀವಿತ ಕಾಲದಲ್ಲಿ ಚೋಳದೇಶದಲ್ಲಿ ಶೈವ ಮತಸ್ಥ ರಾಜನು ರಾಜ್ಯವಾಳುತ್ತಿದ್ದನು. ಅವನು ತನ್ನ ದೇಶದ ಎಲ್ಲಾ ಪಂಡಿತೋತ್ತಮರನ್ನೂ ಕರೆಸಿ 'ಶಿವಾತ್ ಪರತರಂ ನಾಸ್ತಿ' ಎಂಬ ಒಂದು ಪತ್ರಕ್ಕೆ ರುಜುಹಾಕುವಂತೆ ಒತ್ತಾಯಿಸಿದನು. ಅವನ ರಾಜ್ಯಸಭೆಯಲ್ಲಿ 'ನಲ್ಲೂರವನ್' ಎನ್ನುವವನಿದ್ದನು. ಅವನು ಮುಂದೆ ಒದಗಬಹುದಾದಂತಹ ತೊಂದರೆಯನ್ನು ಲೆಕ್ಕಿಸದೆ, ಕೂರೇಶರು ಹಾಗೂ ರಾಮಾನುಜಾಚಾರ್ಯರು ಇಬ್ಬರೂ ಆ ಪತ್ರಕ್ಕೆ ಒಪ್ಪಿಕೊಳ್ಳದಿದ್ದರೆ, ಅದಕ್ಕೆ ಯಾವ ಪ್ರಯೋಜನವೂ ಇಲ್ಲವೆಂದು ರಾಜನಿಗೆ ತಿಳಿಸಿದನು.

ರಾಜನು ಕೂಡಲೆ ಇಬ್ಬರನ್ನೂ ರಾಜಸಭೆಗೆ ಕರೆತರುವಂತೆ ದೂತರನ್ನು ಕಳುಹಿಸಿದನು. ಕೂರೇಶರು ಬಹಳ ದೂರಬುದ್ಧಿಯುಳ್ಳವರು. ಇದರಿಂದ ಅಪಾಯ ಸಂಭವಿಸಬಹುದೆಂದು ಯೋಚಿಸಿ, ತಮ್ಮ ಗುರುಗಳಾದ ರಾಮನುಜಾಚಾರ್ಯರನ್ನು ರಕ್ಷಿಸಬೇಕೆಂದುಕೊಂಡು ತೀರ್ಮಾನಿಸಿದರು. ತಮ್ಮ ಆಚಾರ್ಯರನ್ನು ಕೂಡಲೆ ಕರ್ನಾಟಕ ರಾಜ್ಯಕ್ಕೆ ಹೊರಟು ಸುರಕ್ಷಿತರಾಗಬೇಕೆಂದು ವಿನಂತಿಸಿಕೊಂಡು, ತಾವು ಕೂಡಲೆ ತಮ್ಮ ಆಚಾರ್ಯರ ತ್ರಿದಂಡ ಕಾಷಾಯಗಳನ್ನು ಧರಿಸಿಕೊಂಡು ಅವರ ಉಡುಪಿನಲ್ಲಿ ರಾಜಸಭೆಗೆ ಬಂದರು.

ಇದು ಕೂರೇಶರ ಆಚಾರ್ಯನಿಷ್ಠೆ, ಸಂಪ್ರದಾಯ ಶ್ರದ್ಧೆ ಮತ್ತು ತ್ಯಾಗ ಮನೋಭಾವಕ್ಕೆ ನಿದರ್ಶನವಾಗಿದೆ.

ಚೋಳರಾಜನ ಆಸ್ಥಾನದಲ್ಲಿ ಕೂರೇಶರನ್ನು ಒಂದು ಕಾಗದದ ಮೇಲೆ "ಶಿವಾತ್ ಪರತರಮ್ ನಾಸ್ತಿ" – ಶಿವನಿಗಿಂತ ಹೆಚ್ಚಿಯಾರೂ ಇಲ್ಲ-ಎಂದು ಬರೆದು ಅದಕ್ಕೆ ಸಹಿ ಹಾಕುವಂತೆ ತಿಳಿಸಿದರು. ಕೂರೇಶರು "ದ್ರೋಣಮ್ ಅಸ್ತಿ ತತಃ ಪರಂ" ಎಂದು ಬರೆದರು. ಇದರಿಂದ ರಾಜನು ಕೋಪಗೊಂಡು ಕೂರೇಶರ ಕಣ್ಣುಗಳನ್ನು ಕೀಳುವಂತೆ ಆಜ್ಞಾಪಿಸಿದನು. ಆದರೆ ಕೂರೇಶರು ರಾಜಭಟರು ಅದನ್ನು ಮಾಡಲು ಬಿಡದೆ ತಾವೇ ತಮ್ಮ ಕಣ್ಣುಗಳನ್ನು ಕಿತ್ತುಕೊಂಡರು.

ಈ ರೀತಿ ಕೂರೇಶರು ತಮ್ಮ ನೋಟವನ್ನೇ ಕಳೆದು ಕೊಂಡರು. ಈ ಘಟನೆಯ ನಂತರ ಅವರು ಶ್ರೀರಂಗಕ್ಷೇತ್ರದಲ್ಲಿ ನೆಲಸಲು ಇಷ್ಟವಿಲ್ಲದೆ, ಅಲ್ಲಿಂದ 'ತಿರುಮಾಲಿರುಂ ಶೋಲೈ'ಗೆ ಹೋಗಿ ಅಲ್ಲಿಯೇ ನೆಲಸಿದರು. ಅಲ್ಲಿದ್ದ ಪರಮಾತ್ಮ ಶ್ರೀಸುಂದರ ಬಾಹುಸ್ವಾಮಿ. ಅಲ್ಲಿಯ ದೇವರನ್ನೇ ಸ್ತೋತ್ರ ಮಾಡುತ್ತಾ ಇದ್ದರು. ಅಲ್ಲಿ ಬೆಟ್ಟದಿಂದ ಇಳಿಯುವ ಝರಿ, ಪರ್ವತಮಯವಾದ ಪ್ರಕೃತಿ ಸೌಂದರ್ಯವನ್ನು ತಮ್ಮ ಸ್ತೋತ್ರಗಳಲ್ಲಿ ಅದ್ಭುತವಾಗಿ ವರ್ಣಿಸಿರುವರು. ಕೂರೇಶರು ಐದು ಸ್ತೋತ್ರಗಳಾದ 'ಪಂಚಸ್ತವ'ಗಳನ್ನು ಸಂಸ್ಕೃತದಲ್ಲಿ ಬರೆದಿರುವರು. ಇವುಗಳು 1. ಅತಿಮಾನುಷಸ್ತವ, 2. ಶ್ರೀವೈಕುಂಠಸ್ತವ, 3. ವರದರಾಜಸ್ತವ, 4. ಸುಂದರಬಾಹುಸ್ತವ ಮತ್ತು 5. ಶ್ರೀಸ್ತವ.

ಇವರು ಈ ಸ್ತವಗಳಲ್ಲಿ ಕ್ಲಿಷ್ಟ ವೇದಾಂತ ತತ್ತ್ವವನ್ನು ಸರಳವಾದ ಶೈಲಿಯಲ್ಲಿ ಬರೆದಿರುವರು. ಇವುಗಳಲ್ಲಿ 'ಅತಿಮಾನುಷಸ್ತವ'ದಲ್ಲಿ ಶ್ರೀಮನ್ನಾರಾಯಣನ ಅತಿಮಾನುಷವಾದ ದೈವೀಶಕ್ತಿಯನ್ನು ವರ್ಣಿಸಿದ್ದಾರೆ. ಶ್ರೀಮನ್ನಾರಾಯಣನು ಮನುಷ್ಯನಾಗಿ ಈ ಭೂಲೋಕದಲ್ಲಿ ಬೇರೆ ಬೇರೆ ಅವತಾರಗಳಲ್ಲಿ ಜನಿಸಿ ತನ್ನ ಅತಿಮಾನುಷತ್ವವನ್ನು ತೋರಿಸಿರುವುದನ್ನು ವರ್ಣಿಸಲಾಗಿದೆ.

ರಾಮಾವತಾರದಲ್ಲಿ 'ಆತ್ಮಾನಂ ಮಾನುಷಂ ಮನ್ಯೇ' ಎಂದು ರಾಮನೇ ಹೇಳಿಕೊಂಡಿರುವಂತೆ ರಾಮನು ಮನುಷ್ಯನಾಗಿ ಹುಟ್ಟಿದ. ಇದೇ ರೀತಿಯಲ್ಲಿ ದೇವಕೀವಸುದೇವರ ಪುತ್ರನಾಗಿ ಹುಟ್ಟಿ ಯಶೋದಾ – ನಂದತನಯನಾಗಿ ಶ್ರೀಕೃಷ್ಣ ಪರಮಾತ್ಮ ಬೆಳೆದನು. ಈ ಎರಡೂ ಅವತಾರಗಳು ಮೇಲೆ ನೋಡಲು ಮಾನುಷರೂಪವಾಗಿದ್ದರೂ, ಈ ಅವತಾರಗಳಲ್ಲಿ ಮಾಡಿದ ಕಾರ್ಯಗಳೆಲ್ಲವೂ ಅತಿಮಾನುಷವಾದವುಗಳೆ!

ಅತಿಮಾನುಷಸ್ತವದಲ್ಲಿ ಮೊದಲನೆಯ ಪದ್ಯದಲ್ಲಿ 'ವರಯೇ ವೈಭವಾವತಾರಂ' ಎಂದು ವಿಭವತಾರವನ್ನು ತಾವು ಕೊಂಡಾಡುವುದಾಗಿ ಕೂರೇಶರು ಹೇಳಿರುವರು. ಅಂದರೆ ಮನುಷ್ಯ ಸ್ವಭಾವ, ನಡತೆ, ವೇಷಗಳು, ದೇವತೆಗಳ ವಿಕ್ರಮ ಪರಾಕ್ರಮಗಳಿಗೂ ಮಿಗಿಲಾಗಿ, ಎಲ್ಲಾ ಲೋಕಗಳಲ್ಲಿಯೂ ಸರಿಸಮಾನವಿಲ್ಲದ ವಿಷ್ಣುವಿನ ವಿಭವಾವತಾರದ ಮಹಿಮೆ ಎಂದರ್ಥ.

ಜಗತ್ತಿಗೇ ಆಚಾರ್ಯನಾಗಿ ಮಂತ್ರೋಪದೇಶ ಮಾಡಿದ ಭಗವಂತನೇ ವಿಶ್ವಾಮಿತ್ರರನ್ನು ಆಚಾರ್ಯರನ್ನಾಗಿ ಪಡೆದು, ಅವರಿಗೆ ನಮಸ್ಕರಿಸಿದ. ರಾಮಲಕ್ಷ್ಮಣರು ವಿಶ್ವಾಮಿತ್ರರಿಗೆ ಸೇವಕರಾಗಿ ಬಂದಿರುವುದಾಗಿ ತಿಳಿಸುತ್ತಾರೆ. ಶ್ರೀಕೃಷ್ಣಪರಮಾತ್ಮನು ಸಾಂದೀಪಿನಿಯ ಹತ್ತಿರ ಶಿಷ್ಯನಾಗಿ ಅವರ ಮಗನನ್ನು ತನ್ನ ಗುರುದಕ್ಷಿಣೆಯಾಗಿ ತಂದೊಪ್ಪಿಸುವನು.

ಖರದೂಷಣಾದಿ ರಾಕ್ಷಸರನ್ನು ಸಂಹರಿಸಲು ಶ್ರೀರಾಮನು ಹೊರಟಾಗ ಸೀತಾದೇವಿ ತಡೆಯುತ್ತಾಳೆ. ಆಗ ಶ್ರೀರಾಮನು 'ನಿನ್ನನ್ನೂ ಲಕ್ಷ್ಮಣನನ್ನಾದರೂ ತ್ಯಜಿಸಲು ಸಿದ್ಧನಿರುವೆನೇ ವಿನಃ ಬ್ರಾಹ್ಮಣರನ್ನು ರಕ್ಷಿಸುವೆನೆಂದು ಅಭಯವಿತ್ತು ಅದನ್ನು ಬಿಡುವುದಿಲ್ಲ' ಎನ್ನುವನು.

ಇದೇ ರೀತಿಯಲ್ಲಿ ಶ್ರೀಕೃಷ್ಣನು ಮಮಪ್ರಾಣಾಹಿ ಪಾಂಡವಾಃ–ಪಾಂಡವರು ತನ್ನ ಪ್ರಾಣ ಎಂದು ಹೇಳಿರುವನು. ಅಲ್ಲದೆ ನುಡಿದಂತೆ ನಡೆದು 'ಸೇನೆಯೋರುಭಯೋರ್ ಮಧ್ಯೇ ರಥಂ ಸ್ಥಾಪಯಮೇ ಅಚ್ಯುತ' ಎಂದು ಅರ್ಜುನ ಹೇಳಿದಾಗ ಶ್ರೀಕೃಷ್ಣನು 'ತಥಾಸ್ತು' ಎಂದು ರಥವನ್ನು ಎರಡೂ ಸೇನೆಗಳ ಮಧ್ಯೆ ನಿಲ್ಲಿಸಿದನು. ಇಂತಹ ಆಶ್ರಿತ ವಾತ್ಸಲ್ಯಭಾವ ಶ್ರೀರಾಮ ಶ್ರೀಕೃಷ್ಣರಲ್ಲಿ ಕಾಣಬಹುದು.

ಕೂರೇಶರು ಸ್ವಾಮಿಯ ರೂಪವನ್ನು ಈ ರೀತಿ ವರ್ಣಿಸಿದ್ದಾರೆ. ಶ್ರೀರಾಮನರೂಪ ದಿವ್ಯ ಮೋಹನವಾದುದು. 'ಪುಂಸಾ ಮೋಹನರೂಪಾಯ'–ಪುರುಷರೂ ಕೂಡ ಮೋಹಿಸುವಂತಹ ದಿವ್ಯಸ್ವರೂಪ. ಅವರುಗಳು ತಾವೂ ಸೀತೆಯಾಗಿ ಹುಟ್ಟಲಿಲ್ಲವಲ್ಲಾ ಎಂದು ಪರಿತಪಿಸಿದರಂತೆ.

---

ಶ್ರೀಮತಿ ಬಿ. ಎಸ್. ವಿಜಯಮ್ಮ

---

ಕೃಷ್ಣನಾದರೋ ಮೇಘಶ್ಯಾಮಲ ರೂಪದ ಎ. ಮೇಘದಂತೆ ಕಪ್ಪಾದ ಕೂದಲು, ಕಮಲ ತೆ ವಿಶಾಲವಾದ ನೇತ್ರಗಳು, ತಲೆಯಲ್ಲಿ ನವಿಲು ಕೈಯಲ್ಲಿ ಕೊಳಲು–ಎಲ್ಲರ ಮನಸ್ಸೆಳೆಯುವ ರ್ಷಕರೂಪ.

ಇವರುಗಳ ಪರಾಕ್ರಮವು ದೇವದಾನವರನ್ನು ರಿಸಿದೆ. ಇದನ್ನೇ ಅತಿಮಾನುಷಸ್ತವದಲ್ಲಿ 'ಅತಿ ಘಿತ ಸರ್ವಲೋಕಸಾಮ್ರಾಜ್ಯಂ' ಎಂದಿದ್ದಾರೆ.

ಬಲಿಚಕ್ರವರ್ತಿಯು ಇಂದ್ರನ ರಾಜ್ಯ ನ್ನು ಅಪಹರಿಸಿದ್ದ. ಆಗ ಪರಮಾತ್ಮನು ದ್ರನ ಪ್ರಾರ್ಥನೆಯಂತೆ ವಾಮನನಾಗಿ ಟ್ಟಿ ಬಲಿಯನ್ನು ಮೂರು ಹೆಜ್ಜೆ ದಾನವನ್ನು ಾಚಿಸುವನು. ಸ್ವಾಮಿಯು ಬಲಿಯಿಂದ ಉದಕ ರಾ ಪೂರ್ವಕವಾಗಿ ಒಂದು ಹೆಜ್ಜೆಯಿಂದ ರ್ಧ್ವಲೋಕವನ್ನು, ಮತ್ತೊಂದರಿಂದ ಮಿಯನ್ನೂ ಅಳೆದನು. ಅತಿದೊಡ್ಡ ದಂತ ತ್ರಿವಿಕ್ರಮರೂಪವನ್ನು ತಾಳಿ ಭೂಮಿ ನ್ನು ಅಳೆದಾಗ, ಇವನು ಉತ್ತಮ ಇವನು ಚನೆಂಬ ಭೇದವಿಲ್ಲದೆ ಸರ್ವಸಮನಾಗಿ ಎಲ್ಲರ ಯ ಮೇಲೂ ಹೆಜ್ಜೆಯನ್ನಿಟ್ಟನು. ಅದು ಂದಲೇ ಈಗ ದೇವಸ್ಥಾನಗಳಲ್ಲಿ ಭಗವಂತನ ದಗಳನ್ನು ಯಾವ ಭೇದವೂ ಇಲ್ಲದೆ ಲ್ಲರ ತಲೆಯ ಮೇಲೂ ಇಡುತ್ತಾರೆ. ನ್ನಂದಲೇ ಸೃಷ್ಟಿಸಲ್ಪಟ್ಟ ಪ್ರಳಯ ಲದಲ್ಲಿ ತನ್ನ ಹೊಟ್ಟೆಯಲ್ಲೇ ಅಡಗಿಸಿಟ್ಟು ಂಡ ಮೂರುಲೋಕವು ತನ್ನ ಅಧೀನದಲ್ಲೇ ದ್ದರೂ ಬಲಿಯಹತ್ತಿರ ಮೂರು ಹೆಜ್ಜೆ ಭೂಮಿ ನ್ನು ಯಾಚಿಸಿದ. ಆಗ ಸ್ವಾಮಿಯು ಹೀಗೆ ಾಡದಿದ್ದರೆ ತ್ರಿಲೋಕಗಳು ತನಗೆ ದೊರೆಯುತ್ತಿ ರಿಲ್ಲವೆ? ಇದೇನು ಅಮಾನುಷವ್ಯಕ್ತಿತ್ವ ಎನ್ನು ರು.

ಕೂರೇಶರು ಪರಮಾತ್ಮನ ಸೌಶೀಲ್ಯಗುಣವನ್ನು ರ್ಣಿಸುತ್ತಾ ಹೇಳುತ್ತಾರೆ. ಭಗವಂತನು ಸರ್ವ ಂಸಾರ ಬಂಧವನ್ನೂ ಬಿಡಿಸುವವನು, ತಾನೇ ರೆ ಮನೆಯಲ್ಲಿ ದೇವಕೀವಸುದೇವರ ಗರ್ಭದಲ್ಲಿ ನಿಸಿದ. ಬೆಣ್ಣೆಯನ್ನು ಕದ್ದುತಿಂದು ಯಶೋದೆಯ ಯಲ್ಲಿ ಕಟ್ಟಿಸಿಕೊಂಡನು. ಕೃಷ್ಣನು ಪಾರ್ಥಸಾ ಥಿಯಾದನು. ಶ್ರೀರಾಮನು ದಶರಥನ ಮಗ ಾಗಿ ಜನಿಸಿ ಕಾಡಿನಲ್ಲಿ ಋಷಿಗಳೊಡನೆ, ಬೇಡ ಾದ ಗುಹನೊಡನೆ, ಕಪಿಗಳಾದ ಆಂಜನೇಯ ುಗ್ರೀವರೊಡನೆ ಸ್ನೇಹಮಾಡಿದನು. ಕೌಸಲ್ಯೆಯ ುಗನಾಗಿ ಅಯೋಧ್ಯಾನಗರಿಯಲ್ಲಿ ವಾಸಿಸಿದನು.

ಶ್ರೀರಾಮನು ಮನುಷ್ಯಜನ್ಮಕ್ಕೆ ತಕ್ಕಹಾಗೆ ಸ್ವರ್ಣದಜಿಂಕೆಯನ್ನು ಮಾಯಾಜಿಂಕೆಯೆಂದು ತಿಳಿಯದವನ ಹಾಗೆ, ಸೀತೆಯ ಅಪೇಕ್ಷೆಯಂತೆ ಅದರ ಹಿಂದೆ ಹೋದನು. ಈ ಸಂದರ್ಭದಲ್ಲಿ ಸೀತೆಯನ್ನು ಕಳೆದುಕೊಂಡನು. ಅವಳು ಇರುವ ಜಾಗ ತಿಳಿಯದವನಂತೆ ಅವಳಿಗಾಗಿ ಪರಿತಪಿಸುತ್ತಾನೆ, ಅಲ್ಲದೆ ಗಿಡ, ಮರ, ಬಳ್ಳಿ, ಪಶುಪಕ್ಷಿಗಳನ್ನೆಲ್ಲಾ ಮೊರೆಯಿಡುತ್ತಾನೆ. ಇದೇ ವಿರಹದಲ್ಲಿ ಸೀತೆಗಾಗಿ ಮಾನವನಂತೆ ಪರಿತಪಿಸಿದನು. ನಂತರ ಏನೂ ತಿಳಿಯದ ಮತ್ತು ಉಪವಾಸ ವ್ರತಗಳನ್ನು ಮಾಡದ ಒಂದು ಪಕ್ಷಿ ಜಟಾಯುವಿಗೆ ಮೋಕ್ಷವನ್ನು ಕೊಟ್ಟು ತನ್ನ ಅತಿಮಾನುಷವಾದ ಕಾರ್ಯವನ್ನು ತೋರ್ಪಡಿಸಿದನು.

ನಂತರ ಸುಗ್ರೀವನನ್ನು ತೃಪ್ತಿಪಡಿಸಲು ಮೆಲ್ಲಗೆ ಬಿಟ್ಟ ಬಾಣವೂ ಏಳು ಸಾಲ ಮರಗಳನ್ನು ಕತ್ತರಿಸಿ ಋಷ್ಯಮೂಕ ಪರ್ವತವನ್ನು ಭೇದಿಸಿ ಪಾತಾಳವನ್ನು ಹೊಕ್ಕಿತು. ಸಾಲವೃಕ್ಷಗಳಲ್ಲಿ ಒಂದನ್ನು ಭೇದಿಸಲೂ ಬಳಲುತ್ತಿದ್ದ ವಾಲಿಯಿಂದ ಓಡಿಸಲ್ಪಟ್ಟ ಸುಗ್ರೀವನ ಸ್ನೇಹ ಪಡೆದು, ಸಖ್ಯದಿಂದ ಸೀತಾದೇವಿಯ ಅನ್ವೇಷಣೆಗೆ ಸಹಾಯ ಬೇಡಿದ. ನಂತರ ಹನುಮಂತನಿಂದ ಸೀತೆಯ ಸ್ಥಳವನ್ನು ಅರಿತು ಲಂಕೆಗೆ ಹೋಗಿ ರಾವಣನನ್ನು ಸಂಹರಿಸಿ ಸೀತೆಯನ್ನು ತಂದ. ಇದೆಂತಹ ವಿಚಿತ್ರ ಎಂದರು ಕೂರೇಶರು.

ಸುಗ್ರೀವನ ಸಹಾಯ ಪಡೆದುದು ಶರಣಾಗತ ರಕ್ಷಣಕ್ಕಾಗಿಯೇ ಹೊರತು ತನಗೆ ಸಾಧ್ಯವಿಲ್ಲವೆಂದಲ್ಲ. ಇಲ್ಲಿ ಪರಮಾತ್ಮ ಸತ್ಯಸಂಕಲ್ಪ ಅಸಾಹಾಯ ಶೂರ ಶರಣಾಗತರ ರಕ್ಷಕ. ಆದ್ದರಿಂದ ಸುಗ್ರೀವನ ಸಹಾಯ ಪಡೆದುದು. ಭಗವಂತನಿಗೆ ಯಾರೂ ಶತ್ರುವೂ ಇಲ್ಲ, ಮಿತ್ರರೂ ಇಲ್ಲ.

ಶ್ರೀರಾಮನು ಕಪಿಗಳ ಮೂಲಕ ಸೇತುವೆಯನ್ನು ಕಟ್ಟಿದ. ಇದು ಯಾವ ಮಾನವನಿಗೂ ಸಾಧ್ಯವಿಲ್ಲ. 'ಅಳಿಲು ಭಕ್ತಿ ಮರಳು ಸೇವೆ' ಎಂಬ ವಾಕ್ಯದಿಂದ ಭಗವತ್ಕೈಂಕರ್ಯದಲ್ಲಿ ಪ್ರಾಣಿಯಾದ ಅಳಿಲಿಗೂ ಕೂಡ ಎಷ್ಟು ಭಕ್ತಿ ಇದೆ ಎಂದು ವ್ಯಕ್ತವಾಗುವುದು.

ಶ್ರೀರಾಮನು ಸಮುದ್ರನನ್ನು ಮರೆಹೊಕ್ಕು ಅದು ಸಫಲವಾಗದೆ ಸಾಕ್ಷಾತ್ ವರುಣದೇವನನ್ನೇ ಜಯಿಸಿದ. ಇಂತಹ ಮಹಾಮಹಿಮನಾದ ರಾಮನು ಇಂದ್ರಜಿತ್ತಿಗೆ ಸೋತುಹೋದ. ಆಗ ಹನುಮಂತನು ಮೂಲಿಕೆಗಳನ್ನು ತರಬೇಕಾಯಿತು. ಇದೆಂತಹ ಆಶ್ಚರ್ಯಕೃತ್ಯ. ಇಷ್ಟು ಅಶಕ್ತನೇ ರಾಮನು ಎಂದು ಆಶ್ಚರಿ ಸೂಚಿದ್ದಾರೆ.

ಸ್ವಾಮಿ ಸತ್ಯಕಾಮಃ ಸತ್ಯಸಂಕಲ್ಪ. ಮನುಷ್ಯನಾದರೂ ಜಗತ್ತಿಗೆ ತನ್ನ ಸ್ವಭಾವವನ್ನು ತೋರಿಸಲು ಸಮುದ್ರರಾಜನ ಮೇಲೆ ತೊಟ್ಟ ಬಾಣವನ್ನು ನಿಷ್ಪ್ರಯೋಜನವಾಗದಂತೆ ದಕ್ಷಿಣಲ್ಲಿ ಇದ್ದು ಕೊಂಡೇ, ಉತ್ತರ ದಿಕ್ಕಿನಲ್ಲಿ ದುಮಕುಲ್ಯವೆಂಬ ದ್ವೀಪದ ರಾಕ್ಷಸರು ಸಮುದ್ರದ ನೀರನ್ನು ಹಾಳು ಮಾಡುತ್ತಿದ್ದರು, ಅವರ ಮೇಲೆ ಬಿಟ್ಟು ನಾಶ ಮಾಡಿದನು. ಇದೇ ರೀತಿ ಲಂಕೆಯನ್ನೂ ನಾಶ ಮಾಡಬಹುದಾಗಿತ್ತು. ಅದಕ್ಕೆ ಅಶಕ್ತನಾಗಿದ್ದನೆ ಅಥವಾ ಸಾಧ್ಯವಿರಲಿಲ್ಲವೆ ಎಂದು ಪ್ರಶ್ನಿಸುತ್ತಾರೆ ಕೂರೇಶರು.

ರಾಮನು ಯುದ್ಧದ ಮೊದಲನೆಯ ದಿನವೇ ರಾವಣನಮೇಲೆ ಬಾಣಗಳ ಮಳೆಯನ್ನೇ ಕರೆದನು. ಇದು ಕೇವಲ ಮನುಷ್ಯನ ಕೈಯಲ್ಲಿ ಸಾಧ್ಯವಾಗುತ್ತಿರಲಿಲ್ಲ. ರಾಮನು ಸರ್ವಶಕ್ತನು. ಆದರಿಂದ ರಾವಣನಿಗೆ ರಾಮನ ಬಾಣಗಳ ಪೆಟ್ಟನ್ನು ತಡೆಯಲಾಗಲಿಲ್ಲ.

ಶ್ರೀರಾಮ ಏಕಾಂತದಲ್ಲಿ ಯಮನೊಡನೆ ಮಾತಾಡುತ್ತಿದ್ದಾಗ ಲಕ್ಷ್ಮಣನಿಗೆ ಒಳಗೆ ಯಾರನ್ನೂ ಬಿಡಬೇಡವೆಂದು ಹೇಳಿದ್ದ. ಆದರೆ ದೂರ್ವಾಸ ಮಹರ್ಷಿಗಳು ಬಂದರು. ಅವರನ್ನು ಬಿಡದಿದ್ದರೆ ಕೋಪದಲ್ಲಿ ಯಾರಿಗೆ ಶಾಪಕೊಡುವರೊ ಎಂದು ಒಳಗೆ ಬಿಟ್ಟನು. ಇದರ ಪ್ರಾಯಶ್ಚಿತ್ತಕ್ಕಾಗಿ ಲಕ್ಷ್ಮಣ ತೀರ್ಥಯಾತ್ರೆ ಹೊರಟನು. ಶ್ರೀರಾಮನು ಲಕ್ಷ್ಮಣನಿಲ್ಲದ ಅಯೋಧ್ಯೆಯಲ್ಲಿ ಇರಲಾರದೆ ಪರಮಪದಕ್ಕೆ ಹೊರಟನೆಂದು ರಾಮಾಯಣದಲ್ಲಿದೆ. ಆಗ ಕೋಸಲದೇಶದಲ್ಲಿದ್ದ ತಿರ್ಯಕ್, ಸ್ಥಾವರಗಳೆಲ್ಲವೂ ದುಃಖಿಸಿದವು. ರಾಮನು ಎಲ್ಲರನ್ನೂ ತನ್ನ ಜೊತೆಯಲ್ಲಿ ಕರೆದುಕೊಂಡು ಹೋಗುವುದಾಗಿ ಹೇಳುತ್ತಾನೆ. ಸರಯೂನದಿಯಲ್ಲಿ ಇಳಿದು ಆಚೆಯ ದಡದ ಸಾಂತಾನಿಕ ಲೋಕಕ್ಕೆ ಕರೆದೊಯ್ದನು. ಗಿಡ, ಮರ ಜಂತುಗಳಿಗೂ ಮೋಕ್ಷ ಕೊಟ್ಟ ಸ್ವಾಮಿ, ಮತ್ತೊಂದು ಸಾರಿ ತನಗೆ ಕೊಡುವನೆ? ಎಂದು ಕೂರೇಶರು ಹಂಬಲಿಸುತ್ತಾರೆ. ತಾನೂ ಆಗ ಗಿಡ, ಮರ ಬಳ್ಳಿಯಾಗಿಯಾದರೂ ಹುಟ್ಟಬಾರದಾಗಿತ್ತೆ? ಎಲ್ಲಾ ವಸ್ತುಗಳೂ ಕರ್ಮ, ಜ್ಞಾನ, ಭಕ್ತಿಯೋಗಗಳನ್ನು ಪಡೆದಿರಲಿಲ್ಲ. ಇದು ಸ್ವಾಮಿಯ ಔದಾರ್ಯಗುಣವೆನ್ನುವರು.

ಕೃಷ್ಣನನ್ನು ಅಗಲಿದ ಗೋಪಕನ್ಯೆಯರು ವಿರಹತಾಪದಿಂದ ತಮ್ಮ ದೇಹವನ್ನು ಮರಳಿನಲ್ಲಿ ಹೊರಳಾಡಿಸಿ ಸಮಾಧಾನ ಹೊಂದಿದರಂತೆ. ಕೃಷ್ಣ ಗೋಪಿಯರ ಪಾದಸ್ಪರ್ಶವುಳ್ಳ ಯಮುನಾತೀರದ ಮರಳಾಗಿಯಾದರೂ ಜನಿಸಲಿಲ್ಲವಲ್ಲಾ ಎಂದು ಕೂರೇಶರು ದುಃಖಿಸಿದ್ದಾರೆ.

ಶ್ರೀರಾಮನು ಇದ್ದಕಡೆ ಎಲ್ಲಾ ಗಿಡಮರಗಳು ಫಲಪುಷ್ಪಗಳಿಂದ ತುಂಬಿತುಳುಕಾಡುತ್ತಿದ್ದವು.

ಶ್ರೀರಾಮನು ರಾವಣನ ಸಂಹಾರವಾದ ನಂತರ ಅಯೋಧ್ಯೆಗೆ ತೆರುಳುತ್ತಿದ್ದಾಗ ಭಾರದ್ವಾಜ ಋಷಿಯ ಆಶ್ರಮಕ್ಕೆ ಸೀತಾಸಮೇತ ಬಂದಾಗ ಅವರಿಗೆ ಆನಂದವಾಗುವುದು. ಆಗ ರಾಮನನ್ನು 'ಏನು ಕೇಳಿದರೂ, ಆ ವರವನ್ನು ತಾವು ಕೊಡುವುದಾಗಿ' ಅವರು ಹೇಳುತ್ತಾರೆ. ಆಗ ಶ್ರೀರಾಮನು 'ತಾನು ಇದ್ದ ಜಗವೆಲ್ಲಾ ಸಮೃದ್ಧಿಯಿಂದ ಇರಲಿ' ಎಂದು ಕೇಳುವನು. ಏಕೆಂದರೆ ಅವರ ಮನಸ್ಸಿಗೆ ನೋವಾಗಬಾರದೆಂಬುದೇ ಅವನ ಅಭಿಪ್ರಾಯ. ಇದು ಸ್ವಾಮಿಯ ಔದಾರ್ಯ ಗುಣವನ್ನು ತೋರಿಸುವುದು.

ಶ್ರೀರಾಮನು ಚಿತ್ರಕೂಟದಲ್ಲಿದ್ದಾಗ ಶಾಪಗ್ರಸ್ತನಾದ ಇಂದ್ರನ ಪುತ್ರನು ಕಾಕಾಸುರನಾಗಿ ಬಂದು ಸೀತೆಯ ಎದೆಯಲ್ಲಿ ಕುಕ್ಕಿದ. ಕೋಪಗೊಂಡ ಶ್ರೀರಾಮ ದರ್ಭೆಯನ್ನೆಳೆದು ಬ್ರಹ್ಮಾಸ್ತ್ರ ಜಪಮಾಡಿ ಕಾಕಾಸುರನ ಮೇಲೆ ಬಿಟ್ಟ. ಕಾಕಾಸುರನು ರಕ್ಷಣೆಗಾಗಿ ದೇವತೆಗಳು, ತಂದೆ, ತಾಯಿ, ಮೃಗ, ಪಕ್ಷಿ ಎಲ್ಲರನ್ನೂ ಮೊರೆ ಹೋದರೂ ಯಾರೂ ಏನೂ ಮಾಡಲಾಗಲಿಲ್ಲ. ಆಗ ಕಾಗೆಯು ರಾಮನ ಪಾದಕ್ಕೆ ಇದಿರಾಗಿ ತನ್ನ ತಲೆಯನ್ನು ಹಾಕಿತು. ಆಗ ಸೀತಾದೇವಿ ಅದರ ತಲೆಯನ್ನು ರಾಮನ ಪಾದದಕಡೆ ತಿರುಗಿಸಿದಳು. ಶ್ರೀರಾಮನು ಕಾಗೆಯನ್ನು ಮನ್ನಿಸಿ ಒಂದು ಕಣ್ಣನ್ನು ಮಾತ್ರ ತೆಗೆದನು.

ಶ್ರೀಕೃಷ್ಣಾವತಾರದಲ್ಲಿ ಕೃಷ್ಣನು ಕಂಸನನ್ನು ಕೊಲ್ಲಬೇಕೆಂದಿದ್ದು ಅವನೇ ಕಂಸನಿಗೆ ಹೆದರಿ ಏಕಾಂತದಲ್ಲಿ ನಂದಗೋಕುಲದಲ್ಲಿ ಬೆಳೆಯುತ್ತಾ ಸಮಯ ಕಾಯುತ್ತಾನೆ. ಇದನ್ನು ಅರಿತ ಕಂಸನು ಪೂತನಿಯನ್ನು ಕಳುಹಿಸಿದ. ಆದರೆ ಕೃಷ್ಣನು ಅವಳ ಸ್ತನ್ಯ ಪಾನಮಾಡಲು ಹೋಗಿ ಅವಳ ಪ್ರಾಣವನ್ನೇ ಹೀರಿದ. ಎರಡನೆಯದಾಗಿ ಶಕಟಾಸುರನೆಂಬ ರಾಕ್ಷಸನನ್ನು ಕೃಷ್ಣನು ಸಂಹಾರಮಾಡಿದ.

ಯಮಳಾರ್ಜುನರೆಂಬ ರಾಕ್ಷಸರು ಕಂಸನ ಪ್ರೇರಣೆಯಿಂದ ಮರದಲ್ಲಿ ಬಂದು ಸೇರಿದ್ದರು. ಆಗ ಶ್ರೀಕೃಷ್ಣನು ಮನೆಯಲ್ಲಿ ಬೆಣ್ಣೆ, ಹಾಲು, ಮೊಸರು ಕದ್ದು ತಿಂದ. ಯಶೋದೆಯು ಕೋಪಗೊಂಡು ಒಂದು ಚಿಕ್ಕ ಗಂಟು ಗಂಟಾದ ಹಗ್ಗದಿಂದ ಕೃಷ್ಣನನ್ನು ಒರಳಿಗೆ ಕಟ್ಟಲು ಪ್ರಯತ್ನಿಸುತ್ತಾಳೆ. ಹಗ್ಗ ಸಾಕಾಗಲಿಲ್ಲ. ಬಿಟ್ಟರೆ ಕೃಷ್ಣ ಓಡಿಹೋಗುತ್ತಾನೆ. ಪೇಚಾಡುತ್ತಾಳೆ. ಆಗ ತಾಯಿಯ ಮನಸ್ಸನ್ನು ಅರಿತು ಉಸಿರನ್ನು ಎಳೆದುಕೊಂಡು ತನ್ನನ್ನು ಕಟ್ಟಲು ಅವಕಾಶ ಮಾಡಿಕೊಡುತ್ತಾನೆ. ಕೃಷ್ಣನಿಗೆ ಕಟ್ಟನ್ನು ಬಿಡಿಸಿಕೊಳ್ಳಲು ಸಾಧ್ಯವಿರಲಿಲ್ಲವೆ? ಇದು ಒಂದು ನಾಟಕ, ಇಲ್ಲಿ ಯಶೋದೆ ತನ್ನ ಪ್ರೇಮ ಪಾಶದಿಂದ ಸ್ವಾಮಿಯನ್ನು ಕಟ್ಟಿದಳೆಂದು ಕೂರೇಶರು ಹೇಳುತ್ತಾರೆ.

ಶ್ರೀಕೃಷ್ಣನು ಯಶೋದೆಯು ಕಟ್ಟಿದ ಒರಳು ಸಮೇತ ಹೊರಕ್ಕೆ ಬಂದು ಮರಗಳ ಮಧ್ಯಕ್ಕೆ ಸಿಕ್ಕಿಸಿ ಎಳೆಯುತ್ತಾನೆ. ಮರ ಉರುಳಿ ನಳಕೂಬರು ಶಾಪವಿಮುಕ್ತರಾಗುತ್ತಾರೆ. ಈ ರೀತಿ ಶ್ರೀಕೃಷ್ಣನ ಬಾಲಲೀಲೆಗಳಿಂದ ಅನೇಕ ರಾಕ್ಷಸರು ಮಡಿದರು. ಇಂತಹ ವೀರನಾದ ಶ್ರೀಕೃಷ್ಣನು ಕಂಸನಿಗೆ ಹೆದರಬೇಕಾಗಿತ್ತೆ? ಇದು ಸ್ವಾಮಿಯ ಒಂದು ಅತಿಮಾನುಷವಾದ ಕಾರ್ಯ ಎಂದು ಕೂರೇಶರು ಹೇಳುವರು.

ಕೂರೇಶರು ಹೊರಗಿನ ಭೌತಿಕ ಜಗತ್ತಿಗೆ ನಿಜವಾಗಿಯೂ ಕುರುಡರು. ಆದರೆ ಅಂತರ್ಯದಲ್ಲಿ ಅವರು ಕಂಡ ದಿವ್ಯದೃಷ್ಟಿ ಅತ್ಯದ್ಭುತವಾದುದು. ಪರಮಾತ್ಮನನ್ನು ಸೂರದಾಸರಂತೆ ಸಾಕ್ಷಾತ್ಕರಿಸಿಕೊಂಡರು. ಅವನ ದಿವ್ಯಮಂಗಳ ರೂಪವನ್ನು ಹಾಡಿ, ಹಾಡಿ ಹೊಗಳಿದರು. ಪಂಚಸ್ತವಗಳಲ್ಲಿ ಪರಮಾತ್ಮನ ಲೀಲಾರೂಪವನ್ನು ವಿವರಿಸಿ ತಮ್ಮ ಜನ್ಮವನ್ನು ಸಾರ್ಥಕಪಡಿಸಿಕೊಂಡರು. ಈ ರೀತಿಯಲ್ಲಿ ಐಹಿಕತೆಯಿಂದ ದೂರವಾಗಿ ಸದಾ ದೈವ ಚಿಂತನೆಯಲ್ಲಿ, ಆಚಾರ್ಯ ಚಿಂತನೆಯಲ್ಲಿ, ಆಚಾರ್ಯ ಭಕ್ತಿಯ ಮೂಲಕ ಪರಮಾತ್ಮನ ಸಾನ್ನಿಧ್ಯವನ್ನು ಪಡೆಯಲು ಪ್ರಯತ್ನಿಸಿ ಕೃತಾರ್ಥರಾದರು. ಪರಮಾತ್ಮನ ಭಕ್ತರ ಪೀಳಿಗೆಯಲ್ಲಿ ಕೂರೇಶರು ಒಂದು ಅನೋಘರತ್ನ.

---

(13 ನೇ ಪುಟದಿಂದ)

ಕಾಲಕ್ಕನುಗುಣವಾಗಿ ಕರ್ತವ್ಯಕ್ಕೆ ಲೋಪಬಾರದೆ ಅಭಿರುಚಿಗೆ ತಕ್ಕಂತೆ ರೂಪುಗೊಂಡು ಮೈಸೂರು ದಸರಾದಂತೆಯೇ ನವನವೀನವಾಗಿ ಅದ್ದೂರಿಯಿಂದ ನಡೆಸಲ್ಪಡುತ್ತಿರುವ ಈ ಪರ್ಯಾಯ ಪೂರ್ವಭಾವಿಯಾಗಿ ಕುಳಿತುಕೊಳ್ಳುವ ಶ್ರೀ ಶ್ರೀಗಳವರು ತಮ್ಮ ಪರ್ಯಾಯ ಕಾಲದಲ್ಲಿ ಶ್ರೀಕೃಷ್ಣ ಪೂಜಾಸದ್ವಿನಿಯೋಗಗಳಿಗೆ ಧರ್ಮಕಾರ್ಯಗಳಿಗೆ ಕಿಂಚಿತ್ತೂ ಲೋಪ ಬರಬಾರದೆಂಬ ಸದಿಚ್ಛೆಯಿಂದ ಕಟ್ಟಿಗೆ ಮುಹೂರ್ತ, ಬಾಳೆ ಮುಹೂರ್ತ, ಭತ್ತದ ಮುಹೂರ್ತ, ಅಕ್ಕಿ ಮುಹೂರ್ತ–ಇವೇ ಮೊದಲಾದುವುಗಳನ್ನು ದೇವತಾಪ್ರಾರ್ಥನೆಗಳೊಂದಿಗೆ ನಡೆಸುತ್ತಾರೆ.

ಮಾತ್ರವಲ್ಲದೆ ಜೈತ್ರಯಾತ್ರೆಯನ್ನೂ ಕೈಗೊಂಡು, ಸಕಲ ತೀರ್ಥಸ್ನಾನಗಳೊಂದಿಗೆ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ, ದೂರದೂರಿನಲ್ಲಿ ನೆಲೆಸಿರುವ ತಮ್ಮ ಅಪಾರ ಶಿಷ್ಯ ಸಮುದಾಯವನ್ನು ಕಂಡು ವಿಚಾರವಿನಿಮಯಾದಿಗಳನ್ನು ನಡೆಸಿ ಅನುಗ್ರಹದೊಂದಿಗೆ ತಮ್ಮ ಪರ್ಯಾಯ ಕಾಲಕ್ಕೆ ಬಂದು ಸಹಕರಿಸಿ ಶ್ರೀಕೃಷ್ಣ ಕೃಪಾಕಟಾಕ್ಷಕ್ಕೆ ಪಾತ್ರರಾಗುವಂತೆಯೂ ರಾಯಸವನ್ನಿತ್ತು ಆಮಂತ್ರಿಸುತ್ತಾರೆ.

ಈ ಬಾರಿ ಪರ್ಯಾಯದಲ್ಲಿ ಪೂಜಾಧಿಕಾರವನ್ನು ಪೇಜಾವರಮಠದ ಶ್ರೀ ಶ್ರೀ ವಿಶ್ವೇಶತೀರ್ಥರು ಫಲಿಮಾರು ಮಠದ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರಿಗೆ ಬಿಟ್ಟುಕೊಡುತ್ತಾರೆ. ನಯನಾನಂದಕರವಾದ ಪರ್ಯಾಯ ಮಹೋತ್ಸವದಲ್ಲಿ ಭಾಗಿಯಾಗುವುದೇ ಭಾಗ್ಯ.



(12ನೇ ಪುಟ ದಿಂದ)

೭೫. ಪಾರಶೀ ವಿನೋದ: ವಜ್ರಭೂಷಣ ಕೃತ–೧೭ನೆಯ ಶತಮಾನ ಜ್ಯೋತಿಶ್ಶಾಸ್ತ್ರ ನಿಘಂಟು.

ಬಾಲಬೋಧಿನಿ : ಗೋಸ್ವಾಮಿ ಕೃತ.

೭೬. ಭೂರಿ ಪ್ರಯೋಗ : ಪದ್ಮನಾಭ ದತ್ತ ಕೃತ (೧೩೭೫) ಪರ್ಯಾಯಗಳಿಗಿಂತ ನಾನಾರ್ಥಗಳೇ ಹೆಚ್ಚಿವೆ.

೭೭. ಮದನವಿನೋದ ನಿಘಂಟು : ಮದನಪಾಲ ಕೃತ (೧೩೭೪) – ವೈದ್ಯ ನಿಘಂಟು.

ಮುಗ್ಧಬೋಧಿನಿ : ಭರತಕೃತ.

೭೮ ರಂತಿಕೋಶ : ರಂತಿದೇವ ಕೃತ.

೭೯. ರಭಸಕೋಶ : ರಭಸಪಾಲಕೃತ.

೮೦. ರಾಜ ನಿಘಂಟು : ನರಹರಿ ಕೃತ–ವೈದ್ಯ ನಿಘಂಟು–ಬೃಹತ್ ಕೋಶ.

೮೧. ರುದ್ರನಿಘಂಟು : ರುದ್ರಕೃತ ನಾನಾರ್ಥ ಪದಕೋಶ.

೮೨. ರೂಪಮಂಜರಿ ನಾಮಮಾಲಾ : ರೂಪಚಂದ್ರಕೃತ (೧೫೮೮) ಶಬ್ದರಕ್ಷಣ ನಿಘಂಟು.

೮೩. ಲಕ್ಷ್ಮೀವಿಲಾಸಾಭಿಧಾನ ಕೋಶ : ಶಿವರಾಮ ಕೃತ–ಉಣಾದಿಕೋಶ.

೮೪. ಲಿಂಗವಿಶೇಷ ವಿಧಿ : ವರರುಚಿ ಕೃತ–ಅನುಪಲಬ್ಧ.

೮೫. ವರ್ಣದೇಶನಿ : ಪುರುಷೋತ್ತಮದೇವ ಕೃತ – (೧೧ ನೆಯ ಶತಮಾನ) ವಚನ–ಉಚ್ಚಾರ ವಿಷಯಕವಾದ ಚರ್ಚೆ.

೮೬. ವರ್ಣಾಭಿಧಾನ : ಯದುನಂದನ ಭಟ್ಟಕೃತ–ಏಕಾಕ್ಷರಕೋಶ.

೮೭. ವಾಚಸ್ಪತ್ಯ : ತಾರಾನಾಥ ತರ್ಕವಾಚಸ್ಪತಿ ಕೃತ (೧೮೭೮–೧೮೮೪) ೫ ಸಂಪುಟಗಳು.

೮೮. ವಿವಿಕ್ತನಾಮ ಸಂಗ್ರಹ : ರಾಮಚಂದ್ರಗಣಿಕೃತ (೧೫೫೮ ರಿಂದ ೧೬೦೫) ಅಭಿಧಾನ ಚಿಂತಾಮಣಿ ಆಧಾರ

೮೯. ವೇಶೇಷಾಮೃತ : ತ್ರ್ಯಂಬಕ ಮಿಶ್ರಕೃತ-ಶಬ್ದ ರಕ್ಷಣ ನಿಘಂಟು

೯೦. ವಿಶ್ವನಿಘಂಟು : ವಿಶ್ವಕವಿ–ಮೂರು ಸರ್ಗಗಳು–ನಾನಾರ್ಥ ನಿಘಂಟು.

೯೧. ವಿಶ್ವಪ್ರಕಾಶ : ಮಹೇಶ್ವರ ಕೃತ ೧೧,೧೧೧–ನಾನಾರ್ಥ ನಿಘಂಟು. ಅಂತ್ಯವರ್ಣಕ್ರಮವನ್ನು ಪಾಲಿಸಿದೆ.

೯೨. ವಿಶ್ವಮೇದಿನಿ : ಸಾರಸ್ವತ ಮಿಶ್ರಕೃತ-ಪರ್ಯಾಯ ನಾನಾರ್ಥ ಅವ್ಯಯ ಕಾಂಡಗಳೂ ಇವೆ.

೯೩. ವಿಶ್ವರೂಪ ಕೋಶ : ವಿಶ್ವರೂಪಕೃತ.

೯೪. ವೈಜಯಂತಿ : ಯಾದವಪ್ರಕಾಶ ಕೃತ (೧೧ ನೆಯ ಶತಮಾನ).

೯೫. ವೈದಿಕ ನಿಘಂಟು : ಕ್ರಿ.ಪೂ. ಎಂಟನೆಯ ಶತಮಾನದ, ಮೊದಲ ಸಂಸ್ಕೃತ ನಿಘಂಟು.

೯೬. ವೈದಿಕ ನಿಘಂಟು : ರಾಫ್ತ್ ಹಾಗೂ ಬಾಕ್ಲಿಂಕ್.

೯೭. ವೈದ್ಯ ನಿಘಂಟು : ಧನ್ವಂತರಿ ಕೃತ – ಅಮರಸಿಂಹನಿಗೂ ಪ್ರಾಚೀನ–ಪ್ರಸಿದ್ಧ ಓಷಧ ಕೋಶ.

ವ್ಯಾಖ್ಯಾಸುಧಾ : ಭಾನುಜೀ ದೀಕ್ಷಿತಕೃತ.

ವ್ಯಾಖ್ಯಾಪ್ರದೀಪ : ಅಚ್ಯುತ ಉಪಾಧ್ಯಾಯ ಕೃತ.

೯೮. ವೈಭಾಷಿಕಕೋಶ : ಕೃಷ್ಣಕವಿ ಕೃತ, (೧೮೬೮) – ಶಬ್ದ ರಕ್ಷಣ ನಿಘಂಟು ೧೧೧೧ ಶ್ಲೋಕಗಳು-೧೧ ಸರ್ಗ.

೯೯. ವೋಪಾಲಿಕ ಕೋಶ : ವೋಪಾಲಿಕ ಕೃತ, ಆರ್ಯಾವೃತ್ತ ಬಹುಳವಾಗಿದೆ.

೧೦೦. ಶಬ್ದ ಕಲ್ಪದ್ರುಮ : ರಾಜಾ ರಾಧಾಕಾಂತದೇವಕೃತ, (೧೮೨೮–೫೮) ೫ ಸಂಪುಟಗಳು.

೧೦೧. ಶಬ್ದಚಂದ್ರಿಕಾ : ಚಕ್ರಪಾಣಿದತ್ತ ಕೃತ–ವೈದ್ಯನಿಘಂಟು.

೧೦೨. ಶಬ್ದಭೇದ ಪ್ರಕಾಶಿಕಾ : ಭಟ್ಟೋಜಿ ದೀಕ್ಷಿತ ಕೃತ – ಶಬ್ದರಕ್ಷಣ ನಿಘಂಟು.

೧೦೩. ಶಬ್ದಭೇದ ಪ್ರಕಾಶ : ಮಹೇಶ್ವರಕೃತ–ಶಬ್ದ ರಕ್ಷಣ ನಿಘಂಟು.

೧೦೪. ಶಬ್ದಮಾಲಾ : ರಾಮೇಶ್ವರಶರ್ಮ ಕೃತ–ನಾನಾರ್ಥ ಪದ ಕೋಶ.

೧೦೫. ಶಬ್ದರತ್ನ ಪ್ರದೀಪಾ : ಕಲ್ಯಾಣಮಲ್ಲ ಕೃತ–೫ ಕಾಂಡಗಳು.

೧೦೬. ಶಬ್ದ ರತ್ನಾಕರ : ಮಹೇಶಕೃತ, (೧೮೭೪)–ನಾನಾರ್ಥ ಪದ ವೈಶಿಷ್ಟ್ಯದಿಂದ ಕೂಡಿದೆ.

೧೦೭. ಶಬ್ದ ರತ್ನಾಕರ : ವಾಮನಭಟ್ಟಬಾಣನ ಕೃತ – ೧೭ ನೆಯ ಶತಮಾನ–೩ ಕಾಂಡಗಳು. ನಾನಾರ್ಥ ಮತ್ತು ಅವ್ಯಯ ವಿಷಯಗಳಿವೆ.

೧೦೮. ಶಬ್ದ ರತ್ನಾಕರ : ಸಾಧುಸುಂದರಗಣಿ ಕೃತ (೧೮೮೪)–ಅಭಿಧಾನ ಚಿಂತಾಮಣಿ ಆಧಾರಿತ, ೧೦೦೦ ಶ್ಲೋಕಗಳು.

೧೦೯. ಶಬ್ದ ರತ್ನಾವಳಿ : ಮಥುರೇಶ ವಿದ್ಯಾಲಂಕಾರ ಕೃತ-(೧೮೮೬) ಅಮರಕೋಶಾನುಕೃತ, ನಾನಾರ್ಥ ವರ್ಗಗಳೂ ಇವೆ.

ಶಬ್ದಾರ್ಥ ಸಂದೀಪಿಕಾ : ನಾರಾಯಣ ವಿದ್ಯಾ ವಿನೋದಕೃತ.

೧೧೦ ಶಬ್ದಲಿಂಗಾರ್ಥ ಚಂದ್ರಿಕಾ : ಮಂಖ ಕೃತ–ನಾನಾರ್ಥ ನಿಘಂಟು.

೧೧೧. ಶಬ್ದ ಶಬ್ದಾರ್ಥ ಮಂಜೂಷ : ವಿದ್ಯಾಹಂಮೀರಮಿಶ್ರಕೃತ – ಪರ್ಯಾಯ ಪದ ನಾನಾರ್ಥ ಕೋಶ.

೧೧೨. ಶಬ್ದಾಬ್ಧಿತರೀ : ರಾಮಗೋವಿಂದ ಕೃತ–ಉಣಾದಿ ಕೋಶ.

೧೧೩. ಶಬ್ದಾರ್ಣವ : ವಾಚಸ್ಪತಿ ಕೃತ – ಅಮರಸಿಂಹನಿಗಿಂತ ಪ್ರಾಚೀನ.

೧೧೪. ಶಬ್ದಾರ್ಥ ಚಿಂತಾಮಣಿ : ಸುಖಾನಂದನಾಥ ಕೃತ, (೧೮೮೫–೮೫) ಆಧುನಿಕ ಪದ್ಧತಿಯ ನಿಘಂಟು–ಪ್ರಯೋಗಗಳೂ ಇವೆ.

೧೧೫. ಶಾರದೀಯ ನಾಮಮಾಲಾ : ಹರ್ಷಕೀರ್ತಿ ಕೃತ (೧೬ನೆಯ ಶತಮಾನ)

೧೧೬. ಶಿವಕೋಶ : ಶಿವದತ್ತ ಕೃತ (೧೦೭೭) – ನಾನಾರ್ಥ ಪದ ಸಹಿತ, ಶಿವಪ್ರಕಾಶ ವ್ಯಾಖ್ಯಾನ ಸಹಿತ.

೧೧೭. ಶೀಘ್ರಬೋಧ ನಾಮಮಾಲಾ : ಪುಂಡರೀಕ ವಿಠಲ ಕೃತ(ಅಕ್ಬರನ ಕಾಲದ್ದು).

೧೧೮. ಸಂಸಾರಾವರ್ತ : ವಿಕ್ರಮಾದಿತ್ಯಕೃತ.

ಸಾರಸುಂದರಿ ವ್ಯಾಖ್ಯಾನ : ಮಥುರೇಶ ವಿದ್ಯಾಲಂಕಾರ;

೧೧೯. ಸರಸ್ವತೀ ವಿಲಾಸ: ಪರಿದ್ವಲ್ಲಭಮಿಶ್ರಕೃತ.

೧೨೦. ಹಾರಾವಳಿ : ಪುರುಷೋತ್ತಮ ದೇವಕೃತ.

೧೨೧. ಹೇಮಮೇದಿನಿ : ಸಾರಸ್ವತಮಿಶ್ರಕೃತ–ಅನುಪಲಬ್ಧ.

0ನೇ ಪುಟದಿಂದ)

ಎಂಬ ಪಾರ್ಸೀ ಸಂಸ್ಕೃತ ಕೋಶವನ್ನು ಸಂಗ್ರಹಿಸಿದನು. ಮಹಾದೇವ ಶ್ರೀ ವೇದಾಂತಿಯ 'ಉಣಾ ಕೋಶ'ವೂ ಈ ಕಾಲಕ್ಕೆ ಸೇರಿದುದು. ಇತ್ತೀಚಿನ ತಾರಾನಾಥ ತರ್ಕವಾಚಸ್ಪತಿಯ'ವಾಚಸ್ಪತ್ಯ'ವೂ ರಾಧಾಕಾಂತದೇವನ 'ಶಬ್ದಕಲ್ಪದ್ರುಮವೂ' ಬೃಹದಾಕಾರಗಳಿಂದ ಕೂಡಿದ ಕೋಶಗಳು.

ಇವುಗಳಲ್ಲದೆ ಈಚೆಗೆ ಮೋನಿಯರ್ ವಿಲಿಯಮ್ಸ್, ಆಪ್ಟೆ,ವೈದ್ಯ, ಶ್ರೀವಿದ್ವಾನ್ ಶ್ರೀನಿವಾಸ ಗೋಪಾಲಚಾರ್ ಮೊದಲಾದವರು ದ್ವಿಭಾಷಾ ಕೋಶಗಳನ್ನು ರಚಿಸಿದ್ದಾರೆ.

ಆಂಧ್ರದೇಶೀಯರಾದ ತಾಳ್ಳಪಾಕಂ ಅಣ್ಣಮಾಚಾರ್ಯರ ಮಕ್ಕಳಾದ ತಿರುವೇಂಕಟಾಚಾರ್ಯರು 'ಗುರುಬಾಲಪ್ರಬೋಧಿನಿ' ಎಂಬ ಗ್ರಂಥವನ್ನು ರಚಿಸಿದ್ದಾರೆ. ಆಂಧ್ರಭಾಷೆಯಲ್ಲಿಯೇ ಮಲ್ಲಿನಾಥ ಕೃತ ಅಮರಪದಪಾರಿಜಾತ, ಭಾನು ದೀಕ್ಷಿತ ಕೃತ ಗುರುಚಾರಪ್ರಬೋಧಿನಿ ಎಂಬ ಕೋಶಗಳಿವೆ. ಇವಲ್ಲದೆ ಲಿಂಗಭಟ್ಟೀಯವೆಂಬ ಮತ್ತೊಂದು ಬೃಹತ್ಕೋಶವೂ ಇದೆ. ಅದರ ಕರ್ತೃತ್ವದ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ.

## ಕಿಶೋರಜಗತ್

# ತಂದೆಗೆ ತಕ್ಕ ಮಗ



ವೈವಸ್ವತ ಮನುವಿಗೆ ಅನೇಕ ಜನ ಮಕ್ಕಳಿದ್ದರು. ಅವರಲ್ಲೊಬ್ಬಾತ ನಾಭಾಗ. ಈತ ಪರಮ ಸಾತ್ತ್ವಿಕ ಸ್ವಭಾವದವನು. ಬಹುದೀರ್ಘಕಾಲ ತಪಸ್ಸಾಚರಿಸಿದವನು. ಆ ಕಾಲದ ಮಹೋನ್ನತ ವಿದ್ವಾಂಸ. ನಾಭಾಗ ತಪಸ್ಸಿಗೆ ಹೊರಟ ಸಂದರ್ಭವನ್ನು ಪಯೋಗಿಸಿಕೊಂಡು ಉಳಿದ ಸೋದರರು ಆಸ್ತಿಯನ್ನೆಲ್ಲ ಹಂಚಿಕೊಂಡರು. ಅನೇಕ ವರ್ಷಗಳ ನಂತರ ಹಿಂದಿರುಗಿ ಬಂದು ನಾಭಾಗ ಪರಿಸ್ಥಿತಿಗಳನ್ನು ಸೂಕ್ಷ್ಮವಾಗಿ ಗಮನಿಸಿದ. ಆಸ್ತಿ ವಿಭಾಗವಾಗಿರುವುದಾತನ ಗಮನಕ್ಕೆ ಬಾರದೇ ಹೋಗಲಿಲ್ಲ.

ನನ್ನ ಭಾಗಕ್ಕೇನು ಆಸ್ತಿ ಬಂದಿದೆ–ಎಂದು ಕೇಳಿದಾಗ ಸೋದರರೆಲ್ಲ ಒಟ್ಟಿಗೆ ಹೇಳಿದರು– ನಿನ್ನ ಭಾಗಕ್ಕೆ ತಂದೆಯನ್ನೇ ಕೊಟ್ಟಿದ್ದೇವೆ. ಈ ಮಾತು ಕೇಳಿ ನಾಭಾಗನಿಗೆ ಆಶ್ಚರ್ಯವೂ ಆಯ್ತು. ಸಂತೋಷವೂ ಆಯ್ತು. ತಂದೆ ಹಂಚಿಕೊಳ್ಳುವಂತಹ ಆಸ್ತಿಯೆ! 'ಏನಾದರಾಗಲಿ ಪಿತೃಸೇವಾಭಾಗ್ಯ ದೊರೆಯಿತು' ಎಂಬ ಆನಂದದಿಂದ ನಾಭಾಗ ತೃಪ್ತನಾದ. ಈ ವಿಚಾರ ಕಾಲಕ್ರಮೇಣ ತಂದೆಯ ಗಮನಕ್ಕೆ ಬಂತು. ಆತ ಮಗನನ್ನು ಕರೆದು ಹೇಳಿದ—

"ನಾಭಾಗ – ಆಂಗೀರಸ ಗೋತ್ರಕ್ಕೆ ಸಂಬಂಧಪಟ್ಟ ಜನ ಗಂಗಾನದೀತೀರದಲ್ಲಿ ಯಜ್ಞಮಾಡುತ್ತಿದ್ದಾರೆ. ಆದರೆ ಪೂರ್ವಕರ್ಮಾನುಸಾರವಾಗಿ ಅವರು ಪ್ರತಿ ಆರುದಿನ ಕ್ಕೊಮ್ಮೆ ಕರ್ತವ್ಯ ಭ್ರಷ್ಟರಾಗಿ, ಮಂಕಾಗಿ ಹೋಗುತ್ತಾರೆ. ನೀನು ಅವರಲ್ಲಿಗೆ ಹೋಗಿ ವಿಶ್ವೇದೇವತೆಗಳಿಗೆ ಸಂಬಂಧಪಟ್ಟ ಕೆಲವು ವೇದಸೂಕ್ತಗಳನ್ನು ಉಪದೇಶಿಸು. ತತ್ಕಾಲವಾಗಿ ಅವರು ನಿನಗೆ ಅಪಾರ ದ್ರವ್ಯವನ್ನು ಕೊಡುತ್ತಾರೆ."

ನಾಭಾಗನಿಗೆ ಈ ಸುದ್ದಿ ತುಂಬ ಆಶ್ಚರ್ಯವಾಗಿ ಕಂಡುಬಂತು. ತಂದೆಯ ಸಲಹೆಯಂತೆ ಅವನು ಗಂಗಾನದೀತೀರದಲ್ಲಿದ್ದ ಆಂಗೀರಸರ ಯಜ್ಞಮಂಟಪಕ್ಕೆ ಹೊರಟ. ಬ್ರಹ್ಮತೇಜೋವಿರಾಜಮಾನನಾಗಿದ್ದ ನಾಭಾಗನನ್ನು ಅವರು ತುಂಬ ಭಕ್ತಿಯಿಂದ ಸ್ವಾಗತಿಸಿದರು. ಆತನಿಂದ ಉಪದೇಶ ಪಡೆದರು. ಗುರುದಕ್ಷಿಣೆಯಾಗಿ ಅಪಾರದ್ರವ್ಯವನ್ನು– ತಮ್ಮ ಸರ್ವಸ್ವವನ್ನೂ–ಆತನಿಗರ್ಪಿಸಿದರು. ಆದರೆ ಅಷ್ಟರಲ್ಲೊಂದು ಆಶ್ಚರ್ಯದ ಸಂಗತಿ ನಡೆಯಿತು.

"ಯಜ್ಞಭೂಮಿಯಲ್ಲಿ ಉಳಿದಿರುವ ವಸ್ತುಗಳೆಲ್ಲವೂ ನನಗೆ ಸೇರಿದ್ದು''- ಸುಸ್ಪಷ್ಟವಾಗಿ ಯಾರೋ ಹೇಳಿದಂತಾಯ್ತು.

"ಅದು ಸಲ್ಲದಮಾತು. ಆಂಗೀರಸರು ಎಲ್ಲವನ್ನೂ ನನಗೆ ಕೊಟ್ಟಿದ್ದಾರೆ''–ನಾಭಾಗ ಆ ಅಜ್ಞಾತವಾಣಿಗೆ ಉತ್ತರ ಕೊಟ್ಟ.

ನೀವು ಸಾವಿರ ಮಾತಾಡಬಹುದು. ಪ್ರಯೋಜನವೇನು? ಯಜ್ಞಶಾಲೆಯಲ್ಲಿ ಅವಶಿಷ್ಟ ವಸ್ತುಗಳೆಲ್ಲವೂ ನನಗೆ ಸೇರಿದ್ದು– ಎಂದು ಹೇಳುತ್ತ ಒಂದು ವ್ಯಕ್ತಿ ಅಲ್ಲಿ ಪ್ರತ್ಯಕ್ಷವಾಯ್ತು. ಇಬ್ಬರಿಗೂ ಸ್ವಲ್ಪ ಮಾತು ಜರುಗಿತು. ಎಲ್ಲಿ ಹಣದಪ್ರಶ್ನೆ ಬರುತ್ತದೆ ಅಲ್ಲಿ ಜಗಳ–ಭಿನ್ನಾಭಿಪ್ರಾಯ ಸಹಜ.

ಹಾಗಾದರೆ – ಈ ವ್ಯವಹಾರ ಬಗೆ ಹರಿಯುವುದು ಹೇಗೆ?

ಈ ವಿಚಾರ ನಿನ್ನ ತಂದೆಯನ್ನು ಕೇಳು.

ಆತನ ಮಾತಿನಂತೆ ನಾಭಾಗ ತನ್ನ ತಂದೆಗೆ ಈ ವಿಚಾರ ತಿಳಿಸಿದ. ಆತ ಕ್ಷಣ ಕಾಲ ಯೋಚನೆ ಮಾಡಿ–

"ಹಿಂದೊಮ್ಮೆ ದಕ್ಷಪ್ರಜಾಪತಿ ಯಜ್ಞಮಾಡಿದಾಗ ಅಲ್ಲಿ ಸೇರಿದ್ದ ಮಹರ್ಷಿಗಳು ಒಂದು ತೀರ್ಮಾನ ಮಾಡಿದ್ದಾರೆ. ಅದರಂತೆ ಯಜ್ಞಭೂಮಿಯಲ್ಲಿ – ಯಜ್ಞಾನಂತರ – ಉಳಿದಿರಬಹುದಾದ ಎಲ್ಲ ವಸ್ತುಗಳೂ– ರುದ್ರನಿಗೆ ಸೇರಬೇಕಾದದ್ದು. ಆದ್ದರಿಂದ ಆಂಗೀರಸರ ಯಜ್ಞಶಾಲೆಯಲ್ಲುಳಿದಿರುವ ವಸ್ತುಗಳೆಲ್ಲ ರುದ್ರನ ಭಾಗ. ಅದನ್ನು ಕೇಳಿದವನೂ ಆತನೆ.''—ಎಂದು ಹೇಳಿದ.

ಪಿತೃವಾಕ್ಯ ಪರಿಪಾಲಕನಾದ ನಾಭಾಗ ತಂದೆಯ ಮಾತಿಗೆ ಬದ್ಧನಾಗಿ ರುದ್ರದೇವನಿಗೆ ಎಲ್ಲವನ್ನೂ ಬಿಟ್ಟುಕೊಟ್ಟ. ಇದರಿಂದ ಸಂತುಷ್ಟನಾದ ಆತ ಬ್ರಹ್ಮಜ್ಞಾನವನ್ನು ವರವಾಗಿ ಅನುಗ್ರಹಿಸಿದ. ಅಷ್ಟೇ ಅಲ್ಲ, ತನಗೆ ಸೇರಬೇಕಾದ ಭಾಗವನ್ನೆಲ್ಲ ನಾಭಾಗನಿಗೇ ಅನುಗ್ರಹ ಪೂರ್ವಕವಾಗಿ ಕೊಟ್ಟ.

ಈ ಪುಣ್ಯಪುರುಷನಾದ ನಾಭಾಗನ ಮಗ ಅಂಬರೀಷ. ಯಾವಶಾಪಕ್ಕೂ ಜಗ್ಗದ ವೀರ ಜೀವವೀತ. ಅಖಂಡ ಐಶ್ವರ್ಯ–ಅದ್ವಿತೀಯವಾದ ಅಧಿಕಾರ–ಸಕಲ ಸಂಪದ್ಭರಿತವಾದ ಮಹಾಸಾಮ್ರಾಜ್ಯದ– ವೈಭವ ಜೀವನ ಎಲ್ಲವೂ ಈತನಿಗೆ ಲಭ್ಯವಾಗಿತ್ತು. ಆದರೇನಂತೆ–ನ ತೇಷು ರಮತೇ ಬುಧಃ–ಎಂಬಂತೆ ಯಾವವೈಭವದಲ್ಲೂ ಅಂಬರೀಷನಿಗೆ ಆಸಕ್ತಿ ಇರಲಿಲ್ಲ. ಅನಾಸಕ್ತಿಯನ್ನು ಯೋಗದಂತೆ ಸಾಧಿಸಿಕೊಂಡಿದ್ದ ಧೀರನಾತ. ಆತನ ದೃಷ್ಟಿ

**ವಿದ್ವಾನ್ ಬ. ನ. ಗುಂಡೂರಾವ್**

ಯಲ್ಲಿ ಎಲ್ಲ ಐಶ್ವರ್ಯ– ಎಲ್ಲ ಅಧಿಕಾರ–ಎಲ್ಲ ವೈಭವ–ಕೇವಲ ಒಂದು ಕನಸು. ಇಂದಿದ್ದು ನಾಳೆ ಹೋಗುವ ಅನಿತ್ಯವಸ್ತುಗಳು. ಸಕಲ ವೈಭವದ ಮಧ್ಯೆ ಇದ್ದರೂ ಪೀರವಿರಕ್ತನಾದ ಅಂಬರೀಷನಿಗೆ ಈ ಜಗತ್ತಿನಲ್ಲಿ ಶ್ರೇಯಸ್ಕರವಾಗಿ ಕಂಡದ್ದೇನು? ಶ್ರೀ ಕೃಷ್ಣನ ದಿವ್ಯ ಚರಣಾರವಿಂದಗಳಲ್ಲಿ ಭಕ್ತಿ. ಸ್ವಾಮಿ ನಾಮ ಸಂಕೀರ್ತನೆ. ಅದೊಂದೇ ಆತನ ದೃಷ್ಟಿಯಲ್ಲಿ ಉದ್ಧಾರಕ ವಸ್ತು, ಬಾಳಿಗೆ ರಕ್ಷಾಕವಚ.

ಮನಃ ಕೃಷ್ಣಪದಾರವಿಂದಯೋಃ
ವಚಾಂಸಿ ವೈಕುಂಠ ಗುಣಾನುವರ್ಣನೇ
ಕರೌ ಹರೇರ್ಮಂದಿರ ಮಾರ್ಜನಾದಿಷು
ಶೃತಿಂ ಚಕಾರ ಅಚ್ಯುತ ಸತ್ಕಥೋದಯೇ
ಮುಕುಂದಲಿಂಗಾಲಯ ದರ್ಶನೇದೃಶೌ
ತದ್ಭೃತ್ಯಗಾತ್ರಸ್ಪರ್ಶೇಂಗ
ಸಂಗಮಮ್
ಘ್ರಾಣಂ ಚ ತತ್ಪಾದ ಸರೋಜಸೌರಭೇ
ಶ್ರೀಮತ್ತುಲಸ್ಯಾ ರಸನಾಂ ತದರ್ಪಿತೇ ॥

ಇದು ಅಂಬರೀಷನ ಜೀವನ ಸೂತ್ರವಾಗಿತ್ತು. 'ತತ್‌ಪೂಜಾಕರ್ಮ ಚಬಲಂ' ಎಂಬುದು ಆತನ ಬಾಳ ಪಲ್ಲವಿಯಾಗಿತ್ತು. ಈ ತ್ಯಾಗಜೀವಿಯ ಸಕಲ ಸಂರಕ್ಷಣಾಭಾರವನ್ನು ಶ್ರೀಹರಿಯೇ ವಹಿಸಿಕೊಂಡಿದ್ದ– ಯೋಗಕ್ಷೇಮಂ ವಹಾಮ್ಯಹಂ–ಎಂಬ ತನ್ನ ಭರವಸೆಯಂತೆ.

ಅಂಬರೀಷ ಏಕಾದಶಿ ವ್ರತನಿಷ್ಠನಾದವನು. ಒಂದು ವರ್ಷ ಈ ಕಠಿನ ವ್ರತವನ್ನು ನಿಯಮ ಪೂರ್ವಕವಾಗಿ ಅನುಸರಿಸಿದನು. ವ್ರತಪರಿಸಮಾಪ್ತವಾದಾಗ ಯಮುನೆಯಲ್ಲಿ ಸ್ನಾನಮಾಡಿ - ಯಮುನಾತೀರ ವಿಹಾರಿಯಾದ ಶ್ರೀಕೃಷ್ಣನನ್ನು ಪರಮಭಕ್ತಿಯಿಂದಾರಾಧಿಸಿ - ಸತ್ಪಾತ್ರರಿಗೆ ಅನೇಕ ಬಗೆಯ ದಾನಗಳನ್ನು ಕೊಟ್ಟು ಧನ್ಯನಾಗಿ, ಪಾರಣೆಮಾಡಲು ಸಿದ್ಧನಾದ. ಆಗ ದೂರ್ವಾಸಮಹರ್ಷಿಗಳು ಅಲ್ಲಿಗೆ ಬಿಜಯಮಾಡಿಸಿದರು. ಅಂಬರೀಷ ಅವರಿಗೆ ಅರ್ಘ್ಯಪಾದ್ಯಾದಿಗಳನ್ನಿತ್ತು – ಮಧುಪರ್ಕ ಸಮರ್ಪಿಸಿ, ಭೋಜನಕ್ಕೆ ಸಿದ್ಧವಾಗಬೇಕೆಂದು ಪ್ರಾರ್ಥಿಸಿದ. ಮಹರ್ಷಿ ಸಂತೋಷಪಟ್ಟು ಯಮುನೆಯಲ್ಲಿ ಸ್ನಾನಾದಿಗಳನ್ನು ತೀರಿಸಿಕೊಂಡು ಬರುವುದಾಗಿ ಹೇಳಿ ಆಹ್ನೀಕಕ್ಕಾಗಿ ಹೊರಟರು. ದ್ವಾದಶಿ ಕೇವಲ ಒಂದು ಮುಹೂರ್ತವಿರುವುದನ್ನು ಗಮನಿಸಿದ ಅಂಬರೀಷ ಮಹರ್ಷಿಗಳಾಗಮನವನ್ನೆದುರು ನೋಡುತ್ತ – ತವಕಪಡುತ್ತಿದ್ದ. ಅತಿಥಿಯಾದ ದೂರ್ವಾಸರಿಗೆ ಭೋಜನ ನೀಡದೆ ಆತ ಭುಜಿಸುವಂತಿಲ್ಲ. ದ್ವಾದಶಿ ಮುಗಿದುಹೋದ ಮೇಲೆ ಭೋಜನ ಮಾಡುವಂತಿಲ್ಲ. ಇದು ಅಲ್ಲಿ ಬಂದಿದ್ದ ಧರ್ಮಸಂಕಟ, ಸಂದಿಗ್ಧ. ಎಷ್ಟು ಹೊತ್ತು ನೋಡಿದರೂ ದೂರ್ವಾಸರು ಬರಲಿಲ್ಲ. ಕೇವಲ ಗುಟುಕು ನೀರು ಕುಡಿದು ಪಾರಣೆ ಮುಗಿಸುವುದೆಂದು ಅಂಬರೀಷನು ನಿರ್ಣಯಿಸಿದ. ಇದಾದ ನಂತರ ಮಹರ್ಷಿಗಳಾಗಮಿಸಿದರು. ಅವರು ತುಂಬ ಹಸಿದಿದ್ದಂತೆ ಕಾಣುತ್ತಿತ್ತು. ಅಂಬರೀಷ ಜಲಪಾನಮಾಡಿ ಪಾರಣೆ ಮುಗಿಸಿದ್ದನ್ನು ಅರಿತುಕೊಂಡ ಮಹರ್ಷಿ ಕುಪಿತನಾದ. ಆತ ಮೊದಲೇ ಕೋಪದ ಸ್ವಭಾವದವನು. ಮೇಲಾಗಿ ಹಸಿದಿದ್ದ !! ಅತಿಥಿಗನ್ನವಿಡದೆ ಪಾರಣೆಮಾಡಿದ್ದು ಅಪರಾಧವಾಗಿತ್ತು ದೂರ್ವಾಸನ ದೃಷ್ಟಿಯಲ್ಲಿ. ತನ್ನ ತಪಶ್ಶಕ್ತಿಯಿಂದ ಒಂದು ಶಕ್ತಿದೇವತೆಯನ್ನು ಸೃಷ್ಟಿಸಿದ ದೂರ್ವಾಸ, ಅಂಬರೀಷನನ್ನು ತನ್ಮೂಲಕ ಧ್ವಂಸಮಾಡಬಹುದೆಂದೇ ಭಾವಿಸಿದ. ಆದರೇನು ಯಾವ ಶಕ್ತಿಯೂ – ಯಾರ ಕ್ರೋಧವೂ ಆತನನ್ನು ಏನೂ ಮಾಡಲು ಸಾಧ್ಯವಿರಲಿಲ್ಲ. ಅಂಬರೀಷನ ಸುತ್ತಲೂ ರಕ್ಷಾಕವಚವಂತೆ ಶ್ರೀಹರಿಯ ಸುದರ್ಶನಚಕ್ರ ಗಿರಗಿರನೆ ತಿರುಗಲಾರಂಭಿಸಿತು. ತನ್ನ ಕೋಪ ತನಗೇ ಮೃತ್ಯುವಾದೀತೆಂದು ಭಾವಿಸಿದ ಮಹರ್ಷಿ ಭಯಪಟ್ಟು ಓಡಿದ. ಸುದರ್ಶನಚಕ್ರ ಆತನ ಮೇಲೆರಗಿ ಬರುತ್ತಿತ್ತು. ದಿಕ್ಕುಗಾಣದೆ ದೂರ್ವಾಸ ಬ್ರಹ್ಮದೇವನಲ್ಲಿ ರಕ್ಷಣೆ ಬೇಡಿದ. ಕೈಲಾಸವಾಸಿ ಸದಾಶಿವನಲ್ಲಿ ರಕ್ಷಣೆ ಬೇಡಿದ. ಋಷಿ ನಿರಾಶನಾಗಿ ಕೊನೆಗೆ ಶ್ರೀಹರಿಯ ಬಳಿಗೆ ಶರಣು ಬೇಡಿ ಬಂದ.

ತಮೇವ ಶರಣಂ ಯಾಹಿ । ಹರಿ ಸ್ತೇ ಶಂ ವಿಧಾಸ್ಯತಿ–ಎಂದು ಬ್ರಹ್ಮಾದಿಗಳೂ ಸೂಚಿಸಿದ್ದರು. ವೈಕುಂಠ ನಿಲಯನು ನಗುತ್ತ ಹೇಳಿದ–'ನಾನು ಭಕ್ತರ ಅಧೀನನೇ ಹೊರತು ಸ್ವತಂತ್ರನಲ್ಲ. ತಾವು ಯಾರಿಗೆ ತೊಂದರೆ ಮಾಡಬಯಸಿದಿರೋ ಆ ಅಂಬರೀಷನನ್ನೇ ಬೇಡಿಕೊಳ್ಳಿರಿ - ಆತನೇ ನಿಮ್ಮನ್ನು ರಕ್ಷಿಸುತ್ತಾನೆ'. ಗತ್ಯಂತರವಿಲ್ಲದೆ ತನ್ನ ಬಳಿಗೇ ಬಂದು ಶರಣುಬೇಡಿದ ದೂರ್ವಾಸನ ಸ್ಥಿತಿಯನ್ನು ನೋಡಿ ಅಂಬರೀಷ ಮನಸ್ಸಿನಲ್ಲೇ ನಕ್ಕಿರಬಹುದು. ಆತ ಸುದರ್ಶನಚಕ್ರವನ್ನು ಪ್ರಾರ್ಥಿಸಿ–ಋಷಿಯನ್ನು ರಕ್ಷಿಸಿದ. ಯಾರ ಹೃದಯದಲ್ಲಿ ಕರುಣೆ ಇದೆ ಅವನು ದೊಡ್ಡವನು!! ಅತಿಥಿಯಾದ ದೂರ್ವಾಸನು ಲೋಕಲೋಕಾಂತರಗಳನ್ನು ಸುತ್ತಿಬಂದು ಸುರಕ್ಷಿತವಾಗಿ ಬದುಕಿದನಂತರ ಆತನಿಗೂ ಅನ್ನವಿಟ್ಟು–ಆ ನಂತರ ತಾನು ಪತ್ನೀಸಹಿತ ಊಟಮಾಡಿದ ಅಂಬರೀಷ. ಮಹರ್ಷಿಗೆ ಭಕ್ತಿಯಿಂದ ಕೈ ಮು ಗಿ ದ. ಆಗ ದೂರ್ವಾಸರು ಹೃತ್ಪೂರ್ವಕವಾಗಿ ಹೇಳಿದರಂತೆ— ನಿನ್ನ ಪುಣ್ಯಕಥೆಯನ್ನು ಕೇಳಿದವರನ್ನೂ ಶ್ರೀಹರಿ ಅನುಗ್ರಹಿಸುತ್ತಾನೆ !!

# ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

# ಅಜ್ಞಾತ ದಾಸ ಶ್ರೇಷ್ಠ ಪರಮದೇವ

ಈಚಿನ ವರೆಗೂ ಕರ್ಣಾಟಕದ ದಾಸಸಾಹಿತ್ಯ ಸಂಶೋಧಕರ ಗಮನಕ್ಕೆ ಬಾರದ ಕೀರ್ತನ ರಚಯಿತನೊಬ್ಬ ಕನ್ನಡ ನಾಡಿನಲ್ಲಿ ಬಾಳಿ ಹೋಗಿದ್ದಾನೆ. ಅವನ ಹೆಸರು–ಪರಮದೇವ. ಇವನು ಕವಿಶ್ರೇಷ್ಠನೂ ಹೌದು, ಶ್ರೇಷ್ಠ ಸಂಗ್ರಹ ಕಾರನೂ ಹೌದು.

ಪರಮದೇವನ ಮೂಲ ಹೆಸರು, ಪರಮೇಶ್ವರಯ್ಯ. ಇವನ ತಂದೆ ಶಂಕರನಾರಾಯಣಯ್ಯ. ತಾಯಿ ಮಹಾಲಕ್ಷ್ಮಮ್ಮ. ಪರಮೇಶ್ವರಯ್ಯ ಕೊಲ್ಲೂರು ಮೂಕಾಂಬಿಕೆಯ ವರಪ್ರಸಾದದಿಂದ ಹುಟ್ಟಿದವನು. ಇವನು ಹುಟ್ಟಿದ್ದು ಶಾಲಿವಾಹನ ಶಕ ೧೬೪೩ ನೆಯ ಶಾರ್ವರಿ ಸಂವತ್ಸರದಲ್ಲಿ, ಅಂದರೆ ಕ್ರಿಸ್ತಶಕ ೧೭೨೧ ರಲ್ಲಿ.

ಪರಮೇಶ್ವರಯ್ಯನ ಹುಟ್ಟೂರು ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನ, ಕೊಡಚಾದ್ರಿ ಪರ್ವತದ ತಪ್ಪಲಿನಲ್ಲಿರುವ 'ಸುಳಿಗೋಡು' ಎಂಬ ಹಳ್ಳಿ. ಇವನಿಗೆ ಬಾಲ್ಯವಿದ್ಯಾಭ್ಯಾಸ ತಂದೆಯಿಂದಲೇ ಆಯಿತು. ಇವನ ತಂದೆ ಶಂಕರನಾರಾಯಣಯ್ಯನವರು ವೈದಿಕ ವಿದ್ಯೆಯಲ್ಲಿ ವಿದ್ವಾಂಸರಾಗಿದ್ದಂತೆ, ಯಕ್ಷಗಾನ–ಬಯಲಾಟದ ಭಾಗವತರೂ, ವೇಷಧಾರಿಗಳೂ ಆಗಿ ಪ್ರಸಿದ್ಧರಾಗಿದ್ದರು.

ಪರಮೇಶ್ವರಯ್ಯನೂ, ತಂದೆಯ ಜಾಡಿನಲ್ಲೇ ನಡೆದು ವೈದಿಕ ವಿದ್ವಾಂಸನೂ, ಯಕ್ಷಗಾನದ ಭಾಗವತನೂ, ವೇಷಧಾರಿಯೂ ಆದನು. ಯೋಗ್ಯ ವಯಸ್ಕನಾದಾಗ ಇವನಿಗೆ ವಿವಾಹವೂ ಆಯಿತು ಇವನ ಹೆಂಡತಿಯ ಹೆಸರು, ಭಾಗೀರತಮ್ಮ. ಪರಮೇಶ್ವರಯ್ಯನಿಗೆ, ಶಂಕರಯ್ಯ ಮತ್ತು ಕೃಷ್ಣಯ್ಯ ಎಂಬ ಇಬ್ಬರು ಗಂಡು ಮಕ್ಕಳೂ ಆದರು.

ತಂದೆ–ತಾಯಿಯರ ಮರಣಾಂತರ, ಪರಮೇಶ್ವರಯ್ಯನಿಗೆ ಬಡತನದ ಬವಣೆ ಹೆಚ್ಚಾಯಿತು. ಸಾಲದ ಹೊರೆಯನ್ನು ತೀರಿಸಲಾಗದೆ, ಸಾಲ ಕೊಟ್ಟವರಿಗೆ, ಪಿತ್ರಾರ್ಜಿತ ಆಸ್ತಿಯನ್ನು ವಹಿಸಿ, ಹೆಂಡತಿ ಮಕ್ಕಳೊಡನೆ, ಇವನು, ಸುಳಿಗೋಡನ್ನು ಬಿಟ್ಟನು. ಸಾಗರ ತಾಲ್ಲೂಕಿನ, ಇಕ್ಕೇರಿಯಲ್ಲಿ ಕೆಲವುದಿನ, ಅಘೋರೇಶ್ವರನ ಅರ್ಚಕನಾಗಿದ್ದು, ಅನಂತರ ಇಕ್ಕೇರಿಗೆ ಸಮೀಪದಲ್ಲೇ ಇರುವ "ಚಿಪ್ಪಳಿ" ಎಂಬ ಊರಿಗೆ ಬಂದು ವಾಸಮಾಡ ತೊಡಗಿದನು. ಚಿಪ್ಪಳಿಯಲ್ಲಿದ್ದ ಉದಾರಿಗಳೂ ಭಗವದ್ಭಕ್ತರೂ, ಶ್ರೀಮಂತರೂ ಆಗಿದ್ದ ಲಕ್ಷ್ಮೀನಾರಾಯಣ ಎಂಬುವರು ಇವನಿಗೆ ಆಶ್ರಯ ದಾತರಾದರು. ಇಲ್ಲಿನ ಶ್ರೀವೇಣುಗೋಪಾಲ ಸ್ವಾಮಿಯ ಅರ್ಚಕ ವೃತ್ತಿ ಇವನ ಉದ್ಯೋಗ ವಾಯಿತು. ಪೂಜಾಕೈಂಕರ್ಯದ ಜೊತೆಗೆ, ಇವನು ಉಪಾಧ್ಯಾಯನ ಕೆಲಸವನ್ನೂ ಮಾಡತೊಡಗಿದ. ಬಿಡುವಿನ ವೇಳೆಯಲ್ಲಿ ಪ್ರಾಚೀನ ಕಾವ್ಯಗಳನ್ನೂ, ಶಾಸ್ತ್ರಗಳನ್ನು, ಸಂಹಿತೆಗಳನ್ನೂ ಓಲೆಗರಿಗಳ ಮೇಲೆ ಪ್ರತಿಮಾಡಿ ಇಡುತ್ತಿದ್ದ. ಆಗಿನ ಕಾಲದಲ್ಲಿ ಈ ಪ್ರದೇಶದ ಜನರಲ್ಲಿ ಕಾವ್ಯಗಳನ್ನೂ, ಶಾಸ್ತ್ರ ಗ್ರಂಥಗಳನ್ನೂ ಪ್ರತಿ ಮಾಡಿಸಿ ದಾನ ಮಾಡಿದರೆ, ಕಾಶಿ–ರಾಮೇಶ್ವರಗಳಿಗೆ ಹೋಗಿ ಬಂದಷ್ಟು ಪುಣ್ಯ ಬರುತ್ತದೆ ಎಂಬ ಭಾವನೆ ಇತ್ತು. ಹಾಗಾಗಿ ಪರಮೇಶ್ವರಯ್ಯನ ಪ್ರತಿಮಾಡುವ ಹವ್ಯಾಸಕ್ಕೆ ಪ್ರೋತ್ಸಾಹ ಸಿಕ್ಕಿತು, ಇಷ್ಟೇ ಅಲ್ಲದೆ. ಇವನಲ್ಲಿ ಪುರಾಣಗಳನ್ನು ಪ್ರವಚನಮಾಡುವ, ಕಾವ್ಯಗಳನ್ನು ವಾಚನ ಮಾಡುವ ಹವ್ಯಾಸವೂ, ಇತ್ತು. ಆಗಾಗ್ಗೆ ಈ ಕಾರ್ಯಗಳ ನಿಮಿತ್ತ ಪರ ಊರುಗಳಿಗೂ ಹೋಗಿ ಬರುತ್ತಿದ್ದ. ಹೀಗಾಗಿ ಸ್ವಲ್ಪ ಕಾಲದಲ್ಲಿಯೇ, ಇವನು, ಸುತ್ತ ಜನರ ಗೌರವಕ್ಕೆ ಪಾತ್ರನಾದನು.

ಚಿಪ್ಪಳಿಗೆ ಸಮೀಪದಲ್ಲಿ ಕೇದಿಗೆ ಸರುಹು (ಈಗ ಇದನ್ನು ಕೇಡಲಸರ ಎಂದು ಕರೆಯುತ್ತಾರೆ) ಎಂಬ ಹಳ್ಳಿ ಇದೆ. ಈ ಊರಿನಲ್ಲಿ ಆಗ ಹರವಸೆಯ ಸೊಪ್ಪಿನ ಸುಬ್ಬಣ್ಣ ಎಂಬುವರು ಗಣಪತಿ ದೇವಾಲಯವನ್ನು ಕಟ್ಟಿಸಿದರು. ಸುಬ್ಬಣ್ಣನವರು, ಪರಮೇಶ್ವರಯ್ಯನನ್ನು ಈ ಮಹಾಗಣಪತಿಯ ಅರ್ಚಕನನ್ನಾಗಿ ಆಹ್ವಾನಿಸಿದರು. ಈ ಆಹ್ವಾನವನ್ನು ಒಪ್ಪಿಕೊಂಡ, ಪರಮೇಶ್ವರಯ್ಯ, ಚಿಪ್ಪಳಿಯಿಂದ ಇಲ್ಲಿಗೆ ಬಂದು ನೆಲಸಿ ಕೊನೆಗಾಲದವರೆಗೂ ಬದುಕಿ–ಬಾಳಿದನು.

ಇಲ್ಲಿ ಅರ್ಚಕವೃತ್ತಿಯನ್ನು ಮಾಡುತ್ತಾ, ಪರಮೇಶ್ವರಯ್ಯ, "ತುರಂಗ ಭಾರತ" ಎಂಬ ಶ್ರೇಷ್ಠ ಕೃತಿಯೊಂದನ್ನು ವಾರ್ಧಕ ಷಟ್ಪದಿಯಲ್ಲಿ ಬರೆದನು. ಅನಂತರ ಇವನ ಬಾಳು ಪಕ್ವವಾಗುತ್ತಿದ್ದಂತೆ, ವೈರಾಗ್ಯ ಆವರಿಸಿತು. ಪುರಂದರದಾಸರು ಮುಂತಾದವರ ಕೀರ್ತನೆಗಳನ್ನು ಸಂಗ್ರಹಿಸಿದ್ದೇ ಅಲ್ಲದೆ ತಾನೂ ಅನೇಕ ಭಕ್ತಿಯ ಹಾಡುಗಳನ್ನು ರಾಗ–ತಾಳಬದ್ಧವಾಗಿ ರಚಿಸಿದನು. ಇವನು ಪುರಂದರದಾಸರ ಕೀರ್ತನೆಗಳನ್ನೇ ಅಲ್ಲದೆ, ಕನಕದಾಸರು, ವಿಮಲಾನಂದದಾಸರು- ಮುಂತಾದವರ ಕೀರ್ತನೆಗಳನ್ನು ಸಂಗ್ರಹಿಸಿ, ಬರೆದಿಟ್ಟಿದ್ದಾನೆ. ಅಲ್ಲದೆ ಚಿದಾನಂದಾವಧೂತರ ಅವಧೂತ ಕೀರ್ತನೆಗಳನ್ನೂ ಸಂಗ್ರಹಿಸಿದ್ದು ಜೊತೆಗೆ ತಾನೂ ಅವಧೂತ ಕೀರ್ತನೆಗಳನ್ನು ರಚಿಸಿದನು. ಆದರೆ ಇವನ ಸಂಗ್ರಹಗಳು ಬಹಳಷ್ಟು ನಷ್ಟ

**ಶ್ರೀ ಕೊಡಲಿ ಜಗನ್ನಾಥಶಾಸ್ತ್ರಿ**

ಬಾರೋ ವೆಂಕಟರಮಣ ಭವದುರಿತ ಸಂಹರಣ ॥ ಪ ॥

ನೀರಜದಳಾಂಬಕನೇ ಪುರುಷೋತ್ತಮ ವರನೇ
ಘೋರ ದುರಿತ ಸಂಹರನೇ ಶರಣರ ಸಲಹುವವನೇ
ಬಿರುದಿನಭಿಮಾನಿ ನಿಸ್ಸೀಮ ॥ ೧ ॥

ಕಲಿಯುಗದಿ ನಿನ್ನ ನಾಮವು ಹಲವು ರೂಪದಲಿಹುದು
ಬಲುಬಲು ಬಗೆಯಲಿ ಜನರನು ಸಲಹುತಲೊಲುಮೆಯಿಂದ
ಬಲು ಕಾಣಿಕೆಯನು ಕೊಳ್ಳುತ ॥ ೨ ॥

ಛಲದಂಕ ನೀನೆಂದು ಬಲು ಒಲುಮೆಯಿಂದಲಿ ಬರಲು
ಚಲಿಸದೆ ವರಗಳನಿತ್ತೆಯೋ ಅವರಿಗೆ ತಿರುಪತಿಯ
ಚೆಲುವ ಶ್ರೀ ವೆಂಕಟರಮಣ ॥ ೩ ॥

—ಪರಮದೇವ

ವಾಗಿ ಹೋಗಿದ್ದು, ಕೆಲವು ಮಾತ್ರ ಲಭ್ಯವಿವೆ. ಕರ್ನಾಟಕದಲ್ಲಿ ಜನಪ್ರಿಯವಾದ, ಕೆಲವು ಹೆಂಗಸರು ಬೆಳಗ್ಗೆ ನಿತ್ಯವೂ ಹೇಳಿ ಕೊಳ್ಳುವ, ದ್ರೌಪದಿಯ ವಸ್ತ್ರಾಪಹರಣಕ್ಕೆ ಸಂಬಂಧಿಸಿದ ಕೆಲವು ಪದ್ಯಗಳನ್ನೂ ಇವನು ಸಂಗ್ರಹಿಸಿದ್ದಾನೆ. ಈ ಸಂಗ್ರಹದಲ್ಲಿ ಇವನೇ ರಚಿಸಿದ ಕೆಲವು ಪದ್ಯಗಳನ್ನೂ ಸೇರಿಸಿದ್ದಾನೆ. ಇವು ವಾರ್ಧಕ ಷಟ್ಪದಿಯಲ್ಲಿವೆ.

ವೈವಿಧ್ಯಮಯ ವ್ಯಕ್ತಿತ್ವವುಳ್ಳ ಪರಮೇಶ್ವರಯ್ಯನನ್ನು ಜನ "ಪರಮದೇವ" ಎಂದು ಕರೆದು ಗೌರವಿಸಿದರು.

ಪರಮದೇವ ಶ್ರೇಷ್ಠ ಕವಿಯಾಗಿ, ಹರಿದಾಸನಾಗಿ, ಅವಧೂತನಾಗಿ, ಸಂಗ್ರಹಕಾರನಾಗಿ, ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಸ್ಥಾನವನ್ನು ಪಡೆದಿದ್ದಾನೆ.

ಪರಮದೇವನು ಗಣಪತಿಯನ್ನು ಕುರಿತು ಮೂರು ಹಾಡುಗಳನ್ನು, ಗುರುವನ್ನು ಕುರಿತು ಐದು ಹಾಡುಗಳನ್ನೂ, ಅವನ ಆರಾಧ್ಯದೈವವಾದ ಭೀಮನ ಕೋಣೆಯ ಲಕ್ಷ್ಮೀನಾರಾಯಣನನ್ನು ಕುರಿತು ಮೂವತ್ತನಾಲ್ಕು ಹಾಡುಗಳನ್ನು, ಅವನು ಪೂಜಿಸುತ್ತಿದ್ದ ಚಿಪ್ಪಳಿಯ ಗೋಪಾಲಕೃಷ್ಣನನ್ನು ಕುರಿತು ಒಂಬತ್ತು ಹಾಡುಗಳನ್ನೂ, ಮನೆದೇವತೆಯಾದ ಮೂಕಾಂಬಿಕೆಯನ್ನು ಕುರಿತು ಮೂರು ಹಾಡುಗಳನ್ನೂ, ಅವನು ವಾಸಿಸುತ್ತಿದ್ದ ಕೇದಿಗೆ ಸರುಹಿನ ಸುತ್ತಮುತ್ತ ಇರುವ ಗ್ರಾಮಗಳ ದೇವರನ್ನು ಕುರಿತು ಹದಿಮೂರು ಹಾಡುಗಳನ್ನೂ ಬರೆದಿದ್ದಾನೆ. ಉಡುಪಿಯ ಶ್ರೀಕೃಷ್ಣನನ್ನು ಕುರಿತು, ತಿರುಪತಿಯ ವೆಂಕಟರಮಣನನ್ನು ಕುರಿತು ಬರೆದ ಹಾಡುಗಳೂ ಇವೆ.

ಇವನ ಹಾಡುಗಳು ರಾಗ–ತಾಳ ಬದ್ಧವಾಗಿವೆ. ಇವು ಸಾಕಾರ ರೂಪದ ಭಗವಂತನ ವೈಭವವನ್ನು ವರ್ಣಿಸುತ್ತವೆ. ದೇವರುಗಳ ಅಂಗಾಂಗಗಳ, ಅಲಂಕಾರಗಳ ವರ್ಣನೆಯ ಮೂಲಕ ಆ ದಿವ್ಯ ಮಂಗಳ ರೂಪವನ್ನು ಕಣ್ಣು ಮುಂದೆ ತಂದು ನಿಲ್ಲಿಸುವ, ತನ್ಮೂಲಕ ಸರ್ವ ಸಮರ್ಪಣ ಭಾವವನ್ನು ಉಂಟು ಮಾಡುವ ಶಕ್ತಿ–ಇವನ ಕೀರ್ತನೆಗಳಲ್ಲಿ ಅಡಗಿದೆ. ಇವನ ಕೀರ್ತನೆಗಳಲ್ಲಿ ಕಿರಿದರಲ್ಲಿ ಪಿರಿದರ್ಥವನ್ನು ಸೆರೆ ಹಿಡಿಯುವ ಮೋಡಿ ಇದೆ, ಭಾವುಕತೆ ಇದೆ; ತನ್ಮಯತೆ ಇದೆ. ಇಷ್ಟೇ ಅಲ್ಲ, ಅಂದಿನ ಜನರ ದೈನಂದಿನ ವ್ಯಹಾರಗಳ ಅಲಂಕಾರಗಳ ಚಿತ್ರಣವೂ ಇದೆ. ಇಲ್ಲಿನ ಭಾಷೆ ಸರಳ, ಮೋಹಕ.

ಭಾರತದ ಕವಿಗಳು, ಸಂತರು, ಹರಿದಾಸರು–ಮುಂತಾದವರೆಲ್ಲ ಕೃಷ್ಣನನ್ನು ಒಂದಲ್ಲ ಒಂದು ರೀತಿಯಲ್ಲಿ ವರ್ಣಿಸಿ, ಅವನ ಬಾಲವಿನೋದದ ಆನಂದವನ್ನು ಅನುಭವಿಸಿದ್ದಾರೆ. ಪರಮದೇವನೂ ಗೋಪಾಲನ ಬಾಲಲೀಲೆಯನ್ನು ವರ್ಣಿಸಿ ಆನಂದವನ್ನು ಅನುಭವಿಸಿದ್ದಾನೆ. ಚಿಪ್ಪಳಿಯ ವೇಣುಗೋಪಾಲ ಇವನಿಂದ ಅರ್ಚಿಸಿಕೊಂಡ ದೇವರು. ಇವನ ಬಾಲಲೀಲೆಯನ್ನು ವರ್ಣಿಸುವಾಗ ಪರಮದೇವ ಮೈಮರೆಯುತ್ತಾನೆ.

ತುಂಟ ಕೃಷ್ಣನನ್ನು ತಿದ್ದ ಬೇಕು, ಇಲ್ಲವಾದಲ್ಲಿ ಮುಂದೆ ಪುಂಡನಾಗುತ್ತಾನೆ ಎಂಬುದನ್ನು ಯಶೋದೆ ಬಲ್ಲಳು. ಗೋಪಿಯರು ದೂರವುದರಲ್ಲಿ ಅರ್ಥವಿದೆ ಎಂದುಕೊಂಡ, ಯಶೋದೆ, ಗೋಪಿಯರಿಲ್ಲದಾಗ ಕೃಷ್ಣನಿಗೂ ಬುದ್ಧಿ ಹೇಳುತ್ತಾಳೆ.

ಬೇಡವೋ ರಂಗ ಹೆಂಗಳ ತಳ್ಳಿ ಹೋಗ
ಬೇಡವೋ ನಾ ಬೇಡಿ ಕೊಂಬೆನು ॥ಪ॥

ಎಲ್ಲ ಜೀವರಿಗು ನೀ ಹಿತನಾಗಿರು ಪ್ರೀತಿ
ಯಲ್ಲಿರು ಭಾರಿ ಪುರುಷ ನೀನಾಗಿ
ಹಲ್ಲ ಕಡಿದರಂತೆ ಗೋಪರು ಮಾನ
ಕೊಳ್ಳಲು ಯತ್ನವ ಮಾಡಿಹರಂತೆ ॥೧॥

ಗಂಡು ಹೆಣ್ಣುಗಳೊಂದೆ ಮತವಾಗಿ ನಿನ್ನ
ಕಂಡರೆ ಹಿಡಿದು ಕಟ್ಟುವರಾಗಿ।
ಪುಂಡ ನಿಲ್ಲಿಸ ಬೇಕೆನುತ್ತೆಲ್ಲ ಗೋಪರು
ಕಂಡಿ ಕಣಿವೆ ಕಟ್ಟಿ ಕೊಂಡು ಸಾಧಿಪರಂತೆ ॥೨॥

ಪಾಲುಬೆಣ್ಣೆಯ ಕದ್ದು ಮೆಲುವರೆ ಕೃಷ್ಣ
ಬಾಲೆಯರವಮಾನ ಗೊಳಿಸುವರೆ
ಆಲಯದೊಳಗೇನು ಕಡಮೆಯಾಗಿದೆ ಲಕ್ಷ್ಮೀ
ಲೋಲನ ದಯದಿಂದ ಸಕಲ ಸಂಪತ್ತಿದೆ ॥೩॥

## ಐತಿಹಾಸಿಕ ಹಾಡುಗಳು :

ಪರಮದೇವನ ಕೀರ್ತನೆಗಳಲ್ಲಿ ಐತಿಹಾಸಿಕ ಮಹತ್ತ್ವವುಳ್ಳ ಕೀರ್ತನೆಗಳೂ ಇವೆ. ಇವು ಈ ಹರಿದಾಸನ ವಿಶಿಷ್ಟ ಕೊಡುಗೆ. ಕನ್ನಡದ ಇನ್ನಾವ ಹರಿದಾಸರು ಮಾಡಿದಿರುವ ಉಪಕಾರವನ್ನು ಪರಮದೇವ ಈ ಮೂಲಕ ಮಾಡಿದ್ದಾನೆ.

ಕ್ರಿ. ಶ. ೧೭೯೧ ರಲ್ಲಿ ಪರಶುರಾಮ ಭಾವೂನ ನೇತೃತ್ವದಲ್ಲಿ ಒಂದು ದಂಡು ಬಂದು, ಶಿವಮೊಗ್ಗ ಜಿಲ್ಲೆಯ ಇಕ್ಕೇರಿ ಪ್ರಾಂತವನ್ನು ಕೊಳ್ಳೆ ಹೊಡೆದುಕೊಂಡು ಹೋಗುತ್ತದೆ. ಅವರು ಲೂಟಿ ಮಾಡಿದ್ದು, ಮನೆ ಮಠಗಳನ್ನು ಸುಟ್ಟಿದ್ದು, ಒಡವೆ ವಸ್ತುಗಳನ್ನು ದೋಚಿದ್ದು, ಊರುಗಳಿಗೆ ಬೆಂಕಿಹಚ್ಚಿದ್ದು, ದನಕರುಗಳು ಹಿಂಸೆಪಟ್ಟಿದ್ದು, ಅನಂತರ ಬರಗಾಲದ ಭೀಕರತೆ; ನಿತ್ಯ ಬಳಕೆ ವಸ್ತುಗಳ ಬೆಲೆ ಬಡವರ ಕೈಗೆ ಎಟುಕದಷ್ಟು ಹೆಚ್ಚಾದದ್ದು–ಮುಂತಾದುವುಗಳ ಯಥಾರ್ಥ ಚಿತ್ರಣವನ್ನು ಆತನ ಹಾಡುಗಳಲ್ಲಿ ಕಾಣಬಹುದು.

ಕೇಡಲಸರದ ಗಣಪತಿಯನ್ನು ಕುರಿತು ಬರೆದ ಒಂದು ಹಾಡು ಹೀಗಿದೆ

ಏನು ಕಡಮೆ ನಿನಗೆ ಗಣಪತಿ। ಜ್ಞಾನವ ಕೊಡು ಎನಗೆ ॥ ಪ ॥
ಕಾಲಲಂದಿಗೆ ಮೆರೆವ ಕಿರುಗೆಜ್ಜೆ ಮೇಲೆ ಸರಪಣಿ ಸರವು
ನೀಲ ಮೇಘದ ಕಾಂತಿ ಬಾಲ ಕೇಳಿ ವಿಲಾಸ
ನೀಲ ಕಂಠನ ಸುತ ಸ್ಥೂಲ ಶರೀರಿ ॥ ೧ ॥
ಹೊನ್ನಾಭರಣ ಶೃಂಗಾರ ಕಟಿಗೆ ಚೊಕ್ಕ ಚೆನ್ನಾದ ಉಡುದಾರ
ಚೆನ್ನಾಗಿ ಸುತ್ತಿದ ಪನ್ನಗ ಭೂಷಣ
ಹೊನ್ನ ಕಡಗ ಕೈಯ ಬೆರಳ ಉಂಗರವು ॥ ೨ ॥
ಕುತ್ತಿಗೆಯೊಳಗಿರುವ ದುಂಡು ಮುತ್ತಿನ ಗುಂಡಿನ ಸರವು
ಹತ್ತು ಚತುರ್ಭುಜದೊತ್ತಿನೊಳಗೆ ದಿ
ವ್ಯಾಸ್ತ್ರ ರಂಜಿಸಿ ಹೊತ್ತು ನಡೆವ ಮೂಷಿಕವು ॥ ೩ ॥
ಕುಂದಣದಿಂದ ಕೆತ್ತಿಸಿದ ಕಿರೀಟವು ಛಂದದ ಮುಂದಲೆ ಬೊಟ್ಟು
ಹೊಂದಿಕೆಯಿಂದ ಕಿವಿಯಲಿಟ್ಟ ಕುಂಡಲ
ಗಂಧ ಚಂದನ ಸರ್ವಾಂಗ ಲೇಪಿತನೇ ॥ ೪ ॥
ಪರಿಪರಿ ಭಕ್ಷ್ಯ ಭೋಜ್ಯಗಳು ನಾನಾ ಪರಿಪರಿ ಷಡ್ರಸಾನ್ನಗಳು।
ಕರಿವದನಗರ್ಪಿಸುವ ಸೊಪ್ಪಿನ
ಸುಬ್ಬಗೊಲಿದ ಗಣಪ ನೀಧೀರ ಉದಾರ ॥ ೫ ॥

ಈ ಹಾಡಿನಲ್ಲಿ ಮಲೆನಾಡುಗರು ತಮ್ಮ ಮಕ್ಕಳಿಗೆ ಮಾಡುವ ಮತ್ತು ತನ್ಮೂಲಕ ಅವರು ಆ ಅಲಂಕಾರವನ್ನು ನೋಡಿ ಆನಂದಪಡುವ ರೀತಿ ಸೂಚ್ಯವಾಗಿ ವ್ಯಕ್ತವಾಗುತ್ತಿದೆ.

ಕವಿ ಪರಮದೇವ ತನ್ನ ಜೀವಿತದ ಕೊನೆ ಕೊನೆಗೆ ಅವಧೂತನಾದಂತೆ ಕಾಣುತ್ತದೆ. ಪತ್ನಿ-ಪುತ್ರರು, ಪೌತ್ರರೊಂದಿಗೆ, ಇವನು ನಿತ್ಯ ಜೀವನ ಸಾಗಿಸುತ್ತಿದ್ದರೂ, ತಾವರೆ ಎಲೆಯ ಮೇಲಿನ ನೀರಿನ ಹನಿಯಂತೆ, ಅವುಗಳೊಂದನ್ನೂ ಅಂಟಿಸಿಕೊಳ್ಳದೆ ಭಗವತ್‌ಧ್ಯಾನದಲ್ಲಿಯೇ ಕಾಲ ಯಾಪನೆ ಮಾಡಿದ್ದಾನೆ. ಅಷ್ಟೇ ಅಲ್ಲ, ಅವಧೂತ ಸ್ಥಿತಿಯಲ್ಲಿ ಯೋಗಸಾಧನೆ ಮಾಡಿ ಸಿದ್ಧಿಯನ್ನೂ ಪಡೆದಿದ್ದಾನೆ. ಜನ್ಮತಃ ಈ ಕವಿ ಹವ್ಯಕ; ಅದ್ವೈತಿ. ಪ್ರಾರಂಭದಲ್ಲಿ ಇವನು ನಿರಾಕಾರಬ್ರಹ್ಮದ ಪರವಾಗಿ ಪದಗಳನ್ನು ಹಾಡಿದ್ದಾನೆ.

ನಾರಾಯಣ ನರಹರಿ ಎನ್ನಿ
ಭವಸಾಗರವನು ದಾಟಲಿಕಿದು ಸಾರಾ ॥ಪ॥
ಅಚ್ಯುತಾನಂತ ಗೋವಿಂದ ಕೇಶವ ಎನ್ನಿ
ಸಚ್ಚಿದಾನಂದ ಶ್ರೀಕೃಷ್ಣನೆನ್ನಿ
ಹೆಚ್ಚಿದ ದುರುಳ ದಾನವರ ಸಂಹರಿಸಿದ
ಮುಚುಕುಂದ ವರದಾಯಕನೆನ್ನಿ ॥೧॥
ನೀಲ ಮೇಘ ನಿಭಾಂಗ ರೂಪನು ಎನ್ನಿ
ಕಾಳಿಯ ತುಳಿದ ಗೋಪಾಲನೆನ್ನಿ
ಪಾಲು ಮೊಸರು ಬೆಣ್ಣೆಗಳ್ಳನಿವನು ಎನ್ನಿ
ಭೂಲಲನೆಯ ಗಂಡನೀತನೆನ್ನಿ ॥೨॥
ಶಂಖ ಚಕ್ರಗದೆ ಪದ್ಮಧರನು ಎನ್ನಿ
ಶಂಕರಪ್ರಿಯ ಮುರವೈರಿ ಎನ್ನಿ
ಪಂಕಜವದನ ಕಸ್ತೂರಿ ತಿಲಕನೆನ್ನಿ
ಡೊಂಕತಿದ್ದಿದ ಕುಬುಜೆಯನೀತನೆನ್ನಿ ॥೩॥
ರಾಣಿಯನೊಯ್ದ ರಾವಣನ ಕೊಂಡವನೆನ್ನಿ
ಬಾಣಾಸುರನ ತೋಳ ತರಿದವನೆನ್ನಿ
ಚಾಣೂರಮಲ್ಲ, ಮುಷ್ಟಿಕರ ಸಂಹರಿಸಿದ
ವೇಣುನಾದ ಪ್ರಿಯ ಶ್ರೀರಂಗನೆನ್ನಿ ॥೪॥
ನಾಮವೆ ಗತಿ ಎನ್ನಿ ನಾಮವೆ ಪತಿ ಎನ್ನಿ
ನಾಮವೆ ಪರಕೆ ಸಾಧನವು ಎನ್ನಿ
ಪ್ರೇಮದಿಂದಲಿ ರಸನೆಯೊಳು ಲಕ್ಷ್ಮೀಶನ
ನಾಮಸ್ಮರಣೆಯನು ನುಡಿನುಡಿಗೆನ್ನಿ ॥೫॥

ದೇಹದ ಅನಿತ್ಯತೆ ಬ್ರಹ್ಮದ ನಿತ್ಯತೆ–ಇವು ಅವಧೂತರು ಕಂಡ ಸತ್ಯ. ಪರಮದೇವನೂ ಈ ಸತ್ಯದ ದರ್ಶನ ಮಾಡಿ ಆನಂದಿಸಿದ್ದಾನೆ. ಸಾವು ದೇಹಕ್ಕೆ ಅನಿವಾರ್ಯವಾದ ಪರಿಣಾಮ ಎಂಬುದನ್ನು ಈ ಪದದಲ್ಲಿ ಹೀಗೆ ಹೇಳುತ್ತಾನೆ.

ಯಾವ ಕಾಲ ತಪ್ಪಿದರು ಸಾವ ಕಾಲ ತಪ್ಪದು
ಯಾವ ಜೀವ ಜಂತುಗಳಿಗು
ಕಾಯವಿಡಿದು ಬಂದ ಬಳಿಕ ॥ಪ॥
ಇರಲಿ ಜನನಿ ಜಠರದೊಳಗೆ
ಧರಗೆ ಜನಿಸಿ ತಂದೆತಾಯ
ಕರದೊಳಿರಲಿ ಸ್ತನವ ನುಂಡು
ಭರದಿ ನಿದ್ರೆಗೈಯುತಿರಲಿ
ನೆರೆದ ಬಾಲರೊಡನೆ ಆಡಿ ಚರಿಸುತಿರಲಿ
ಬಾಲಕತ್ವ
ತೆರಳಿ ಜವ್ವನವು ಬಂದು
ರಮಣಿಯನ್ನೆ ವರಿಸಿ ಇರಲಿ
ಇರಲಿ ಸಿರಿಯ ಸಡಗರದಲಿ
ಕರಿಹಯಂಗಳನ್ನೆ ಹತ್ತಿ ಮೆರೆಯುತಿರಲಿ

ದೊರೆಗಳೊಡನೆ ಚರಿಸುತಿರಲಿ
ಮೇರುಗಿರಿಯ ಶಿರ
ದೊಳಿರಲಿ ಶರಧಿ ಮಧ್ಯ
ಪುರುದೊಳಿರಲರಣ್ಯದೊಳಗೆ
ತಿರುಗುತಿರಲಿ ಅತಳ ವಿತಳ
ಸುತಳವನ್ನೆ ಪೊಕ್ಕುಯಿರಲಿ

ಒಂದು ದಿನ ಗೋಪಿಯರೆಲ್ಲ ಒಟ್ಟಾಗಿ ಬಂದು ಯಶೋದೆ ಎದುರು ಕೃಷ್ಣನ ತುಂಟತನದ ಬಗ್ಗೆ ದೂರು ಹೇಳುತ್ತಾರೆ:

ಕೇಳೆ ನಂದನ ಕಾಂತೆ ಹೇಳೆ ಮಗಗೆ ಬುದ್ಧಿ
ಬಾಲೆಯರನು ಇರಗೊಡನೆ ದಮ್ಮಯ್ಯ ॥ಪ॥
ಕುತ್ತಿಗೆಯೊಳಗಣ ಮುತ್ತಿನ ಸರಗಳ
ಕಿತ್ತು ಹರಿದು ಚೆಲ್ಲಿ ಪೋದ ದಮ್ಮಯ್ಯ ॥೧॥
ಕಟ್ಟಿದ ಕರುಗಳ ಬಿಟ್ಟು ಒಲೆಯ ಮೇಲೆ
ಇಟ್ಟಪಾಲ್ಗಳನೆಲ್ಲ ಕುಡಿದ ಗೋಪಮ್ಮ ॥೨॥
ಸಿಕ್ಕದೊಳಿಹ ಬೆಣ್ಣೆ ಚಕ್ಕನೆಲ್ಲವ ಮೆದ್ದು
ಮರ್ಕಟಗಳಿಗಷ್ಟನಿತ್ತ ದಮ್ಮಯ್ಯ ॥೩॥
ಬೇಡವೆಂದರೆ ಛಲಗೇಡಿ ಹಿಡಿದು ಎನ್ನ
ನೋಡಿ ಮೋಸವಮಾಡಿ ಹೋದ ದಮ್ಮಯ್ಯ ॥೪॥
ಮರುತಾತ್ಮಜ ಕೋಣೆ ಲಕ್ಷ್ಮೀರಮಣ ಗೊಮ್ಮ
ನಾರಿ ನೀ ಬುದ್ಧಿಯ ಹೇಳೆ ದಮ್ಮಯ್ಯ ॥೫॥

ಯಶೋದೆಯೂ ಚತುರೆಯಾದ ತಾಯಿ. ಕೃಷ್ಣನ ತುಂಟತನ ಅವಳಿಗೂ ಗೊತ್ತು. ಆದರೆ ಆ ಬಾಲಕೃಷ್ಣನ ಬಗ್ಗೆ ಅಭಿಮಾನವೂ ಹೆಚ್ಚು. ಆದ್ದರಿಂದ ಗೋಪಿಯರ ದೂರನ್ನು ಯಶೋದೆ ನಿರಾಕರಿಸುತ್ತಾಳೆ. ತನ್ನ ಮಗನಿಗೆ ಅಂತಹ ಧಾರ್ಷ್ಟ್ಯ ಇಲ್ಲ ಎನ್ನುತ್ತಾಳೆ:

ಸುಮ್ಮನೆ ದೂರಿದರೆ ನಾ ನಂಬೆನು ರಂಗ
ಗುಮ್ಮ ಬಂದನೆಂದವರಂಜುವನು ॥ಪ॥

ಸುಳ್ಳು ಸಟೆಯನಾಡಬೇಡಿರೇ ಜಾತಿ
ಗೊಲ್ಲತಿಯರು ನೀವಾದರೆ ಎಲ್ಲ
ಬಲ್ಲ ನಾರಿಯರು ಒಂದುಗೂಡಿರೆ ಕಟ್ಟಿ
ಕಳ್ಳ ಕೃಷ್ಣನ ತಂದು ತೋರಿರೇ ॥೧॥

ಮುತ್ತಿನ ಚೆಂಡಾಟವಾಡುವ ನಂದ
ನೊತ್ತಿಲಿ ಪಾಲ್ಬೆಣ್ಣೆ ಮೆಲ್ಲುವ ಪಣಿಗೆ
ಕಸ್ತೂರಿ ತಿಲಕವ ರಚಿಸುವ ಯಾ
ವತ್ತು ಪೊಂಗೊಳಲನು ನುಡಿಸುವ ॥೨॥

ಕಾಲೊಳಂದಿಗೆ ಗೆಜ್ಜೆ ದನಿ ಮಾಡುವ ತನ್ನ
ತಾಳ ಗತಿಗೆ ತಾನೆ ನಲಿದಾಡುವ ನಂದ
ನೋಲಗವನು ಕ್ಷಣ ಬಿಡುದಿರುವ ಲಕ್ಷ್ಮೀ
ಲೋಲ ತನ್ನೊಳು ತಾನೆ ನಲಿದಾಡುವ ॥೩॥

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಕಾಯವಿದುವೆ ತನ್ನ ಪೆತ್ತ
ತಾಯಿತಂದೆಗಳಿಗೋ
ಜಾಯೆಸುತರು ಗೃಧ್ರ
ಭಲ್ಲುಕಾದಿಗಳಿಗೋ ಪುಲಿಗೋ
ವಾಯಸಕೊ ಕ್ರಿಮಿಗೊ
ಕೀಟಕಾದಿಗಳಿಗೋ ಪಾಯ್ವನರಿಗೋ
ವಾಯುಸುತನ ಕೋಣೆ
ಲಕ್ಷ್ಮೀರಮಣನೊಬ್ಬ ಬಲ್ಲನಿದನು

ಕನ್ನಡ ಸಾಹಿತ್ಯದಲ್ಲಿ ದಂಡಕವನ್ನು ಬರೆದವರು ಅಪರೂಪ. ಅದರಲ್ಲಿಯೂ ಕೀರ್ತನ ರಚಯಿತರಲ್ಲಿ ದಂಡಕವನ್ನು ಬರೆದವರು ಇಲ್ಲವೆಂದರೂ ಒಪ್ಪುತ್ತದೆ. ಪರಮದೇವ ಈ ಪ್ರಕಾರದಲ್ಲಿಯೂ ತನ್ನದೇ ವೈಶಿಷ್ಟ್ಯವನ್ನು ಉಳಿಸಿ ಕೊಂಡಿದ್ದಾನೆ. ಇವನು ತನ್ನ ದಂಡಕವನ್ನು "ವಿಭೂತಿ ದಂಡೆ" ಎಂದು ಕರೆದಿದ್ದಾನೆ. ಇದು ಈ ದಂಡಕ್ಕೆ ಔಚಿತ್ಯಪೂರ್ಣ ಹೆಸರೂ ಹೌದು. ಸೃಷ್ಟಿಯ ಎಲ್ಲ ಮಹತ್ ವಸ್ತುಗಳ, ದಿವ್ಯ ಶಕ್ತಿಗಳ ಸ್ಮರಣೆ ಮತ್ತು ನಮನ ಈ ದಂಡಕದಲ್ಲಿದೆ. ಇಲ್ಲಿನ ಪದಲಾಲಿತ್ಯ ಅಂತಃಕರಣದ ಜಾಗೃತಿಗೆ ಉತ್ತಮ ಮಾಧ್ಯಮವಾಗಿದೆ. ಈ ದಂಡಕದ ಒಂದು ಪದವನ್ನು ಇಲ್ಲಿ ನೋಡೋಣ.

"ಮಂದರಧರ ವಾಸುದೇವ ವೈಕುಂಠಪತಿ ಇಂದಿರಾರಮಣ, ಈರೇಳು ಭುವನೋದ್ಧರಣ, ಸಿಂಧುಶಯನ, ಅಮರ ಮುನಿವೃಂದ ಸೇವಿತ, ಲೋಕವಂದ್ಯ, ವಾಮನ ಉಪೇಂದ್ರ, ನಂದ ನಂದನ, ತ್ರಿವಿಕ್ರಮ ಜನಾರ್ಧನ, ಸುಜನ ಬಂಧು, ರವಿಶತಕೋಟಿಸಂಕಾಶ, ಜಗದೀಶ, ಕಂದುಗೊರಳನ ಮಿತ್ರ, ಅರವಿಂದ ನೇತ್ರ; ಗೋವಿಂದ ಸಲಹೋ ಎಂಬುದು"

ಇವುಗಳೇ ಅಲ್ಲದೆ ಪರಮದೇವನು ಬರೆದಿರುವ ಉದಯರಾಗದ ಹಾಡು, ಗಜೇಂದ್ರ ಮೋಕ್ಷದ ಹಾಡು ನಿತ್ಯ ಪಾರಾಯಣ ಯೋಗ್ಯವಾಗಿವೆ.

———



(23ನೇ ಪುಟದಿಂದ)

ತನ್ನ ಸತಿಯರೊಲುಮೆಗೊಲಿದು
ತಾನು ಸುಖಿಸಬಾರದೆ
... ... ... ...
ಹೆಂಡರು ಮಕ್ಕಳು ತಂದೆತಾಯಿಗಳು
ಹಿತಮಾಡುವ ಲೊಳ ಲೊಟ್ಟೆಮ್ಮ
... ... ... ...
ಅತಿಪ್ರೀತಿ ಯಿಂದಲಿ
ಮದುವ್ಯಾದ ಮೋಹದ
ಸತಿ ನಿನ್ನ ಮರಣ ಕಾಲದಲ್ಲಿ
ಗತಿ ಯಾರು ತನಗೆಂದು
ಗೋಳಿಡುವಳಲ್ಲದೆ
ಜಾತೆಯಾಗಿ ನಿನ್ನ ಸಂಗಡ ಬಾಹೋರಿಲ್ಲ

ಪುರಂದರದಾಸರು ಜನರ ನಡವಳಿಕೆಯನ್ನು ಕುರಿತು ಹಾಡಿರುವುದು ಮಾತ್ರವಲ್ಲ, ಅವರು ಸರಿದಾರಿಯಲ್ಲಿ ಬರಬೇಕೆಂದೂ ಹಾರೈಸುತ್ತಾರೆ.

ಸತಿಸುತರೆಂದು ನೆಚ್ಚಲು
ಬೇಡ ಮನದೊಳು
ಹಿತವರೊಬ್ಬರು ಕಾಣೆ ಜೀವವೆ
... ... ... ...
ಉಬ್ಬದಿರು ಉಬ್ಬದಿರು ಎಲೆ ಮಾನವ
ಮಾಳಿಗೆ ಮನೆ ಎಂದು
ಮತ್ತೆ ಸತಿಸುತರೆಂದು
ಜಾಳಿಗೆ ಧನ ಧಾನ್ಯ ಪಶುಗಳೆಂದು
ತನ್ನ ಸತಿಸುತರು ಬಂಧುಗಳ ನೋಯಿಸಿ
ಚಿನ್ನ ದಾನವ ಮಾಡಿಫಲವೇನು.

ಆವೇದನೆ ಅನೇಕ ಬಗೆಯಾಗಿರುತ್ತದೆ. ತನ್ನ ಆವೇದನೆ, ತನ್ನವರ ಆವೇದನೆ, ಜನರ ಆವೇದನೆಗಳು.

ಇರಬೇಕು ಇಲ್ಲದಿರಬೇಕು
ಕಲಹಗಂಟ ಸತಿ ಕರ್ಕಶಿಯಾದರೆ
ಹಲವುಪರಿಯಿಂದ ಹೊರಗಾಗಬೇಕು
ಕುಲಸತಿಯಾದರೆ ಕೂಡಿರಬೇಕು
ಸುಲಭದಿಂದಲಿ ಸ್ವರ್ಗ ಸೂರಾಡಬೇಕು
ಸತಿಯಳ ಸಂಗದಿ ಸೌಖ್ಯವಿದ್ದರೆ
ಸಲಿಗೆ ಕೊಟ್ಟ ಕೋತ್ಯಂಬರು

ಇವಲ್ಲದೇ ಪತಿಯನ್ನು ಹೀನವಾಗಿ ನೋಡುತ್ತಾ ತಾನು ಗರ್ವಿಸುವ ಸ್ತ್ರೀಯರನ್ನು ಪುರಂದರದಾಸರು ನಿರಾಕರಿಸಿದ್ದಾರೆ.

ಪತಿ ಶೂನ್ಯವಾದ ಯೌವನದ ಬಾಳೇನು
ಅತ್ತೆಸತ್ತರೆ ಸೊಸಿಗೆ ಬುದ್ಧಿ ಯಾಯಿತು
'ರಮಣ ನಿಲ್ಲದ ನಾರಿ
ಪರರ ಕಣ್ಣಿಗೆ ಮಾರಿ'
.................
'ನೋಡಬಾರದು ಎಂದೆಂದಿಗೂ
ಅತ್ತೆಮಾವರ ಸೇವೆ ಮಾಡದೆ
ಪತಿಗೆ ಅಂಜದವಳ'

ಇದೇ ಪ್ರಕಾರ ಅನುಕೂಲ ಸತಿಯರನ್ನು ಕೈಬಿಡಬಾರದೆಂದು ಗಂಡಸರಿಗೆ ಎಚ್ಚರಿಕೆ ನೀಡಿದ್ದಾರೆ.

'ವೇಶ್ಯೆಯ ನೆಚ್ಚಿ ತನ್ನ ನಾರಿಯು
ಬಿಡುವಂಥ ಪುರುಷನ್ಯಾಕೆ'
'ಒಂಟಿಯಲಿ ಹೆಂಡತಿಯು
ಬಿಡುವಾತನೇ ಮೂರ್ಖ'
'ಯಮನ ಶಾಸನ ಕೇಳೋ ಜೀವ
ಪರ ಸತಿಯರ ನೋಡಿದವಗೆ
ಹತ್ತುಕೊರಡು.'

ಸಾಮಾನ್ಯಜನರಿಗಾಗಿ ಪದಗಳನ್ನು ಹಾಡಿದ ಪುರಂದರದಾಸ ಕೀರ್ತನೆಗಳಲ್ಲಿ ಸತೀಸುತರ ಪ್ರಸಂಗ ಪ್ರತ್ಯೇಕವಾಗಿ ನೋಡಲಾಗಿದೆ.

---

**ಮುಂದಿನ ಸಂಚಿಕೆಯಲ್ಲಿ .... .... ....**

**ಸಪ್ತಗಿರಿ. ಫೆಬ್ರವರಿ — 1986**

**ಸಂಸ್ಕೃತದ ಭಕ್ತಿಗೀತೆಗಳು** — ಡಾ॥ ಎಸ್. ಅನಂತರಂಗಾಚಾರ್

**ದೀಕ್ಷಿತರ ನವಗ್ರಹ ಕೀರ್ತನೆಗಳು** — ಡಾ॥ ಕೆ. ಸರ್ವೋತ್ತಮರಾವ್

**ಮಣಿಪುರ ಕ್ಷೇತ್ರ** — ಸುಮನ ಯಜುರ್ವೇದಿ

**ಕುಲಶೇಖರಾಳ್ವಾರ್** — ಡಿ. ಕೃಷ್ಣ ಅಯ್ಯಂಗಾರ್

**ಸೂರ್ಯದೇವಾಲಯಗಳು**

(ರಥಸಪ್ತಮಿ ವಿಶೇಷ ಪರಿಚಯ)

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ — ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಫೆಬ್ರವರಿ 1986

| | | |
|---|---|---|
| 4. | ಮಂಗಳವಾರ | ಗುರುಮೌಢ್ಯ ಪ್ರಾರಂಭ |
| 10. | ಸೋಮವಾರ | ತಿರುಕಚ್ಚಿ ನಂಬಿ ಉತ್ಸವಾರಂಭ |
| 12. | ಬುಧವಾರ | ಕುಂಭ ಸಂಕ್ರಮಣ |
| 15. | ಶನಿವಾರ | ವೈವಸ್ವತಮನ್ವಾದಿ |
| 16. | ಭಾನುವಾರ | ರಥ ಸಪ್ತಮಿ, ಸೂರ್ಯಜಯಂತಿ, ಭೀಷ್ಮಾಷ್ಟಮಿ |
| 18. | ಮಂಗಳವಾರ | ಮಧ್ವನವಮಿ |
| 1°. | ಬುಧವಾರ | ತಿರುಕಚ್ಚಿ ನಂಬಿ ಶಾತ್ತುಮೊರ |
| 20. | ಗುರುವಾರ | ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವಾರಂಭ |
| 21. | ಶುಕ್ರವಾರ | ಕುಲಶೇಖರಾಳ್ವಾರ್ ವರ್ಷತಿರುನಕ್ಷತ್ರ |
| 23. | ಭಾನುವಾರ | ಶುಕ್ರಮೌಢ್ಯ ನಿವೃತ್ತಿ |
| 24. | ಸೋಮವಾರ | ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವ ಸಮಾಪ್ತಿ |
| 26. | ಬುಧವಾರ | ಶ್ರೀನಿವಾಸ ಮಂಗಾಪುರಂ ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಅಂಕುರಾರ್ಪಣ |
| 27. | ಗುರುವಾರ | ಬ್ರಹ್ಮೋತ್ಸವ ಧ್ವಜಾರೋಹಣ |

ದಿನಾಂಕ 6 ರ ಸಂಜೆ ಶ್ರೀ ಜಗದ್ಗುರು ಶೋಂಟದಾರ್ಯ ಮಹಾಸ್ವಾಮಿಗಳು ಉದ್ಘಾಟಿಸಿದ ಸಂಗೀತೋತ್ಸವದಲ್ಲಿ ಶ್ರೀ ಸುಬ್ರಹ್ಮಣ್ಯಮಠದ ಶ್ರೀ ವಿದ್ಯಾಭೂಷಣತೀರ್ಥರ ಭಕ್ತಿಸಂಗೀತ ಕಚೇರಿ ನಡೆಯಿತು. ಅನಂತರ ಮುಂಬಯಿ ಸೋದರಿಯರಿಂದ (ಶ್ರೀಮತಿ ಲಲಿತಾ ಶ್ರೀಮತಿ ಸರೋಜಾ) ಕರ್ನಾಟಕ ಸಂಗೀತ ಆಕರ್ಷಿಸಿತು. 7 ರಂದು ಬೆಳಗ್ಗೆ ಮಧ್ಯಾಹ್ನ ಗಳಲ್ಲಿ ವಿದ್ಯಾರ್ಥಿಗಳಿಗೆ, ಸಾರ್ವಜನಿಕರಿಗೆ ಸಂಗೀತ ಸ್ಪರ್ಧೆ ಏರ್ಪಾಡಾಗಿದ್ದಿತು. ಅಂದು ಸಂಜೆ ಶ್ರೀ ಶ್ರೇಣಿ ಗೋಪಾಲಕೃಷ್ಣ ಭಟ್ಟರ ಹರಿಕಥೆ ನಡೆದು, ನಂತರ ಶ್ರೀ ಸಿದ್ಧರಾಮು ಜಂಬಲದಿನ್ನಿಯವರ ಹಿಂದೂಸ್ತಾನಿ ಗಾಯನ ಏರ್ಪಾಡಾಗಿದ್ದಿತು. 8 ರಂದು ಬೆಳಗ್ಗೆ ನಡೆದ ವಿಚಾರ ಗೋಷ್ಠಿಯಲ್ಲಿ ಸರ್ವಶ್ರೀ ಪ್ರೊ॥ ಎಂ. ರಾಜಗೋಪಾಲಾಚಾರ್ಯ, ಡಾ॥ ಹೊಸಬೆಟ್ಟು ಸೀತಾರಾಮಾಚಾರ್ಯ, ಶ್ರೀ ಉ. ಲ. ಹಯವದನಾಚಾರ್ಯರುಗಳು ಕ್ರಮವಾಗಿ ದಾಸಸಾಹಿತ್ಯದ ಪದಬಂಧದಲ್ಲಿ ರಾಗವಿನ್ಯಾಸ, ಕನಕದಾಸರ ಕೀರ್ತನೆಗಳಲ್ಲಿ ದಾಸತ್ವ ಮತ್ತು ಸಮಕಾಲೀನತೆ, ವಾದಿರಾಜರ ಕೀರ್ತನೆಗಳಲ್ಲಿ ಮಧುರಭಾವ-ಎಂಬ ಪ್ರಬಂಧಗಳನ್ನು ಮಂಡಿಸಿದರು. ಅಂದು ಸಂಜೆ ಶ್ರೀ ಅಂಬಲಪಾಡಿ ಕೃಷ್ಣರಾವ್ ಅವರ ಅಧ್ಯಕ್ಷತೆಯಲ್ಲಿ ಸಮಾರೋಪ ನಡೆಯಿತು. ಶ್ರೀ ಟ್ರಿಕ್ಕಿ ಗೋವಿಂದರಾವ್ ಅವರಿಂದ ಕರ್ನಾಟಕ ಸಂಗೀತ ಕಾರ್ಯಕ್ರಮ ನಡೆಯಿತು.

ಮೂರುದಿನವೂ ತಿರುಪತಿಯ ದಾಸ ಸಾಹಿತ್ಯ ಪ್ರಾಜೆಕ್ಟಿನ ವತಿಯಿಂದ ಹರಿದಾಸ ಸಾಹಿತ್ಯ ವಸ್ತುಪ್ರದರ್ಶನ ನಡೆಯಿತು. ಅಪಾರ ಜನ ವಸ್ತುಪ್ರದರ್ಶನವನ್ನು ವೀಕ್ಷಿಸಿ ಆನಂದ ಹೊಂದಿದರು. ದಾಸಸಾಹಿತ್ಯ ಪ್ರಾಜೆಕ್ಟಿನ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾರ್ಯರು 'ಕರ್ನಾಟಕದ ವಿವಿಧ ನಗರ, ಗ್ರಾಮಗಳ ಸಂಘಸಂಸ್ಥೆಗಳು, ಅಪೇಕ್ಷೆಪಟ್ಟು ತಮಗೆ ಬರೆದಲ್ಲಿ ಇತರೆಡೆಗಳಲ್ಲೂ ಪ್ರದರ್ಶನವನ್ನೂ ದಾಸಸಾಹಿತ್ಯವನ್ನೂ ಕೊಂಡೊಯ್ಯುವ ಅಪೇಕ್ಷೆ ಅವಕಾಶಗಳಿವೆಯೆಂದೂ' ತಿಳಿಸಿದರು. 'ವರ್ಷಕ್ಕೆ ಹತ್ತು ಕಡೆಗಳಲ್ಲಿ ಇಂತಹ ಕಾರ್ಯಕ್ರಮಗಳಿಗೆ ಅವಕಾಶವಿರುವುದರಿಂದ ಜನ ಆಸಕ್ತಿಯಿಂದ ದಾಸ ಸಾಹಿತ್ಯವನ್ನು ತಮ್ಮಲ್ಲಿಗೆ ಬರಮಾಡಿಕೊಳ್ಳುವರೆಂದು ಭಾವಿಸಲಾಗಿದೆ.




Edited and Published on behalf of the T. T. Devasthanams by K. Subba Rao, M.A., and Printed T. T. D. Press by M. Vijayakumar Reddy, Manager, T. T. D. Press, Tirupati – 517501.

